# ಮಾನಸಿ

ತಿಂಗಳ ಪತ್ರಿಕೆ ಮೇ 94'

★ ಮಹಿಳೆಯರಿದ್ದಾರೆ ?

★ ಕೇರಳದ ಕಮ್ಯುನಿಷ್ಟರಿಗೆ ದುಃಸ್ವಪ್ನವಾಗಿರುವ ಕೆ. ಆರ್. ಗೌರಿ

★ ಇರಬಹುದೆ ?

★ ಪಿತೃ ಪ್ರಧಾನತೆ

★ ಮೌನ ಮಾತಾದಾಗ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : ೯ ಸಂಚಿಕೆ : ೪

ಮೇ - ೧೯೯೪

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

**ಸಂಪರ್ಕ ವಿಳಾಸ**

ನಂ. 457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು–560 086

ಸೂಚನೆ : ಬಿಡಿ ಪ್ರತಿ : **3. 00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


## ಈ ಸಂಚಿಕೆಯಲ್ಲಿ...




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು-೫೬೦೦೬೭



# ಸಂಪಾದಕೀಯ

ಕರ್ನಾಟಕ ಸರ್ಕಾರ ಸಾಕ್ಷರತಾ ಆಂದೋಲನಕ್ಕಾಗಿ ಲಕ್ಷಾಂತರ ರೂ.ಗಳನ್ನು ಖರ್ಚು ಮಾಡುತ್ತಿದೆ. ಕ್ರಮೇಣ ಒಂದೊಂದು ಜಿಲ್ಲೆಯನ್ನು ಸಂಪೂರ್ಣ ಸಾಕ್ಷರತೆಯನ್ನು ಸಾಧಿಸಿದ ಜಿಲ್ಲೆಯೆಂದು ಘೋಷಿಸಿ ಬೆನ್ನು ತಟ್ಟುವ ಕಾರ್ಯ ನಡೆಯುತ್ತಲೇ ಇದೆ. ತಾಲ್ಲೂಕಿನ ಹಳ್ಳಿ ಹಳ್ಳಿಗಳಲ್ಲಿ ಸಾಕ್ಷರತಾ ಆಂದೋಲನದ ಬಗ್ಗೆ ಸಾಕಷ್ಟು ಪ್ರಚಾರವಾಗಿದೆ. ಹೀಗೆಂದ ಮಾತ್ರಕ್ಕೆ ಜನರು ಸಂಪೂರ್ಣ ವಾಗಿ ಸಾಕ್ಷರರಾಗಿದ್ದಾರೆಂಬ ಅರ್ಥವೆ ?

ಸಾಕ್ಷರತಾ ಆಂದೋಲನ ನಿಜವಾದ ಅರ್ಥದಲ್ಲಿ ಜನರ ಆಂದೋಲನ ವಾಗಬೇಕಾದರೆ ತನ್ನ ಸೀಮಿತ ಪರಿಧಿಯಿಂದ ಹೊರಬರಬೇಕಾಗುತ್ತದೆ. ಜನರು ಎದುರಿಸುತ್ತಿರುವ ಸಾಮಾಜಿಕ ಸಮಸ್ಯೆಗಳಿಗೆ ಸುಧಾರಣಾವಾದಿ ಪರಿಹಾರಗಳನ್ನು ಕಂಡುಹಿಡಿಯುವುದು ಅಗತ್ಯವಾದರೂ ಅದರಲ್ಲಿಯೇ ತೃಪ್ತಿ ಪಡುವ ಅಥವಾ ಅದೇ ಸೂಕ್ತ ಪರಿಹಾರವೆಂಬ ಭ್ರಮೆಯಿಂದ ಈಚೆ ಬರ ಬೇಕಾಗಿದೆ.

ಸಾಕ್ಷರತಾ ಆಂದೋಲನದ ಅಕ್ಷರ ಜ್ಞಾನವು ಬೆಳಕಿನ ಬಾಗಿಲನ್ನು ತೆಗೆಯುವುದರ ಜೊತೆಗೆ ಜನರ ಮೂಲಭೂತ ಸಮಸ್ಯೆಗಳ ಪ್ರಶ್ನೆಗಳಿಗೆ ಉತ್ತರ ಹುಡುಕುವ ಪ್ರಯತ್ನಕ್ಕೆ ಇಂಬು ನೀಡಬೇಕಾಗಿದೆ. ದೈನಂದಿನ ಸಮಸ್ಯೆಗಳ ಬೇರುಗಳ ಹಿಂದಿರುವ ವ್ಯವಸ್ಥೆಯ ಪರಿಚಯ ಅವರಿಗಾಗ ಬೇಕಾಗಿದೆ. ಈ ಅಕ್ಷರ ಅರಿವು ನ್ಯಾಯಯುತ ಸಮಾಜದ ನಿರ್ಮಾಣಕ್ಕೆ ಕಣ್ಣಾಗಬೇಕಾಗಿದೆ.

# ಮಹಿಳೆಯರಿದ್ದಾರೆ ?

## ವಯಸ್ಕರ ಶಿಕ್ಷಣ ಪಠ್ಯಗಳ ವಿಶ್ಲೇಷಣೆ

● ವೆಂ. ವನಜಾ

ಕಳೆದ ಸಂಚಿಕೆಯಲ್ಲಿ ಮಹಿಳೆಯರನ್ನು ಸಶಕ್ತಗೊಳಿಸುವಲ್ಲಿ ಸಾಕ್ಷರತೆಯ ಸಾಧಕ - ಬಾಧಕಗಳನ್ನು ಕುರಿತಾಗಿ ಚರ್ಚಿಸಲಾಗಿತ್ತು. ಅದು ಸಾಕ್ಷರತಾ ಆಂದೋಲನದಲ್ಲಿನ ವೈಯಕ್ತಿಕ ಅನುಭವ, ಗ್ರಹಿಕೆಗಳಿಂದ ಇಡೀ ಸನ್ನಿವೇಶಕ್ಕೆ ಒಂದು ಒಟ್ಟಾರೆಯಾದ ವಿಶ್ಲೇಷಣೆಯನ್ನು ತರುವಂತಹ ಬರಹವಾಗಿತ್ತು. ಅದಕ್ಕೆ ಪೂರಕವಾಗಿ ಮೂಡಿಬಂದಿರುವ ಇಲ್ಲಿಯ ಲೇಖನ ಸಾಕ್ಷರತಾ ಕಾರ್ಯಕ್ರಮಗಳಲ್ಲಿ ಬಳಸಲಾಗುವ ಪಠ್ಯಗಳಲ್ಲಿ ಹಾಸುಹೊಕ್ಕಾಗಿರುವ ಲಿಂಗಭೇದ ಧೋರಣೆಯನ್ನು ವ್ಯವಸ್ಥಿತವಾಗಿ ಬಯಲು ಮಾಡುತ್ತದೆ. ಇವೆರಡೂ ಲೇಖನಗಳು ಮಹಿಳೆ - ಸಾಕ್ಷರತೆಯನ್ನು ಕುರಿತ ಸಮಗ್ರ ದೃಷ್ಟಿಕೋನವೊಂದಕ್ಕೆ ಸಾಧ್ಯತೆಗಳನ್ನು ಒದಗಿಸಬಹುದೆಂಬುದು ಆಶಯ.

ಮಾನವ ಸಂಪನ್ಮೂಲ ಅಭಿವೃದ್ಧಿಯ ಅವಿಭಾಜ್ಯ ಅಂಗವಾದ ಶಿಕ್ಷಣ ಸಮಗ್ರಾಭಿವೃದ್ಧಿ ಪ್ರಕ್ರಿಯೆಯಲ್ಲಿ ಹೊಂದಿರುವ ಪಾತ್ರ ಮಹತ್ತರವಾದದ್ದು. ರಾಷ್ಟ್ರೀಯ ಶಿಕ್ಷಣ ನೀತಿ ಮರುಸ್ಪಷ್ಟ ಪಡಿಸುವಂತೆ, "ಮಹಿಳೆಯರ ಸ್ಥಾನಮಾನದಲ್ಲಿ ಮೂಲಭೂತ ಬದಲಾವಣೆಗೆ ತರುವ ಸಾಧನವಾಗಿ ಶಿಕ್ಷಣವನ್ನು ಬಳಸಿಕೊಳ್ಳಲಾಗುತ್ತದೆ. ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯು ಮಹಿಳೆಯರ ಸಶಕ್ತತೆಯನ್ನು ತರುವಲ್ಲಿ ಇತ್ಯಾತ್ಮಕವಾದ ಮಧ್ಯಪ್ರವೇಶಿಕೆ ಮಾಡುತ್ತದೆ. ಮರುರೂಪಿಸಲಾದ ಪಠ್ಯಕ್ರಮಗಳು, ಪುಸ್ತಕಗಳು; ಶಿಕ್ಷಕರಿಗೆ, ತೀರ್ಮಾನ ಕೈಗೊಳ್ಳುವವರಿಗೆ ಮತ್ತು ಆಡಳಿತ ನೋಡಿಕೊಳ್ಳುವವರಿಗೆ ನೀಡುವ ತರಬೇತಿ ಮತ್ತು ಶೈಕ್ಷಣಿಕ ಸಂಸ್ಥೆಗಳ ಕ್ರಿಯಾಶೀಲ ಭಾಗವಹಿಕೆಯನ್ನು ತರುವುದರ ಮೂಲಕ ಅದು ಹೊಸ ಮೌಲ್ಯಗಳ ಬೆಳವಣಿಗೆಗೆ ಸಹಕಾರಿಯಾಗುತ್ತದೆ". (ರಾಷ್ಟ್ರೀಯ ಶಿಕ್ಷಣ ನೀತಿ, ಭಾಗ iv , ಸಮಾನತೆಗಾಗಿ ಶಿಕ್ಷಣ, 4.2ನೇ ಪ್ಯಾರ 1986) ಅದೇನೇಯಾದರೂ ಬೇರೆ ಬೇರೆ ಸಮಿತಿಗಳು ಮಹಿಳೆಯರ ಸ್ಥಾನಮಾನದ ವಿಚಾರದಲ್ಲಿ ಮಾಡಿರುವ ಶಿಫಾರಸ್ಸುಗಳ ನಡುವೆಯೂ ಮಹಿಳೆಯರ ಶಿಕ್ಷಣದ ವಿಚಾರದಲ್ಲಿ ಅಂತಹ ಬದಲಾವಣೆಯೇನೂ ಕಾಣುತ್ತಿಲ್ಲ. ಇವತ್ತಿಗೂ ಶಿಕ್ಷಣದ ಬೇರೆ ಬೇರೆ ಹಂತಗಳಲ್ಲಿ ಕಲಿಯುವ ಹುಡುಗರು ಮತ್ತು ಹುಡುಗಿಯರ ಸಂಖ್ಯೆಯಲ್ಲಿ ದೊಡ್ಡ ಅಂತರವೇ ಇದೆ ಮತ್ತು ಶಾಲೆ ಬಿಡುವ ಹುಡುಗಿಯರ ಸಂಖ್ಯೆ ತುಂಬಾ ಹೆಚ್ಚು. ಮಹಿಳೆಯರ ಸಾಕ್ಷರತಾ ಪ್ರಮಾಣ ಪುರುಷರದಕ್ಕಿಂತ ತೀರಾ ಕಡಿಮೆ.

ದೇಶದಲ್ಲಿ ದೊಡ್ಡ ಪ್ರಮಾಣದಲ್ಲಿ ಸಾಕ್ಷರತೆಯನ್ನುಂಟು ಮಾಡುವ ಉದ್ದೇಶದಿಂದ 1988ರಲ್ಲಿ ಮಹತ್ವಾಕಾಂಕ್ಷಿಯಾದ, ಅತಿ ದುಬಾರಿಯ ಸಾಕ್ಷರತಾ ಆಂದೋಲನವನ್ನು ಹಮ್ಮಿಕೊಳ್ಳಲಾಯಿತು. ಔಪಚಾರಿಕ ಶಾಲಾ ಕಲಿಕೆಗೆ ಒಳಗಾಗದ ಪುರುಷ, ಮಹಿಳೆಯರನ್ನು ವ್ಯವಹಾರಕ್ಕೆ ಬೇಕಾಗುವಷ್ಟು ಸಾಕ್ಷರನ್ನಾಗಿಸುವುದು ಇದರ ಗುರಿ. ವ್ಯವಹಾರಕ್ಕೆ ಬೇಕಾಗುವಷ್ಟು ಎನ್ನುವುದರ ಅರ್ಥ :

ಅಕ್ಷರ ಜ್ಞಾನ ಮತ್ತು ಲೆಕ್ಕಾಚಾರಗಳಲ್ಲಿ ಸ್ವಾವಲಂಬನೆ ಹೊಂದುವುದು.

ತಮಗಾಗಿರುವ ಅನ್ಯಾಯದ ಅರಿವನ್ನು ಪಡೆಯುತ್ತಾ ಸಂಘಟನೆ ಮತ್ತು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಪಾಲುಗೊಳ್ಳುವುದರ ಮೂಲಕ ಪರಿಸ್ಥಿತಿಯ ಸುಧಾರಣೆಯತ್ತ ನಡೆಯುವುದು.

ಆರ್ಥಿಕ ಮತ್ತು ಸಾಮಾನ್ಯ ಸ್ಥಿತಿಗಳ ಸುಧಾರಣೆಗಾಗಿ ಕುಶಲತೆಗಳನ್ನು ಪಡೆಕೊಳ್ಳುವುದು.

ರಾಷ್ಟ್ರೀಯ ಸಮಗ್ರತೆ, ಪರಿಸರ ರಕ್ಷಣೆ, ಮಹಿಳೆಯರ ಸಮಾನತೆ, ಸಣ್ಣ ಕುಟುಂಬ ಮುಂತಾದವುಗಳ ಮಹತ್ವವನ್ನು ಅರಿಯುವುದು.

ಈ ವ್ಯಾಖ್ಯೆಯಂತೆ, ಮಹಿಳೆಯರ ಸ್ಥಾನಮಾನವನ್ನು ಸುಧಾರಿಸುವ ಮತ್ತು ಲಿಂಗ ಸಮಾನತೆಯನ್ನು ತರುವ ಹೊಸ ಮೌಲ್ಯಗಳು ಪುರುಷ ಮತ್ತು ಮಹಿಳೆಯರಿಬ್ಬರಲ್ಲೂ ಒಳಗೊಳ್ಳಬೇಕು. ಆದರೆ ವಾಸ್ತವದಲ್ಲಿ, ಪರಿಸ್ಥಿತಿ ಬೇರೆಯೇ ಇದೆ. ಪಠ್ಯಗಳಲ್ಲಿ ನಿಜವಾದ ಸಮಸ್ಯೆಗಳ ಬಗ್ಗೆ ಯಾವುದೇ ಕಳಕಳಿಯಿರುವುದು ಕಂಡುಬರುವುದಿಲ್ಲ. ಅವು ಅನ್ಯಾಯ ಮತ್ತು ಶೋಷಣೆಗಳನ್ನೊಳಗೊಂಡ ಸಾಮಾಜಿಕ ರಚನೆಯನ್ನು ಪ್ರಶ್ನಿಸುವುದಿಲ್ಲ. ಈ ಕಾರ್ಯಕ್ರಮಗಳು ಕೊಡುವ ಸಂದೇಶ, ಮಾಹಿತಿ ಮತ್ತು ಮೌಲ್ಯಗಳನ್ನು ಕಂಡುಕೊಳ್ಳುವ ಉದ್ದೇಶದಿಂದ ಕಮಲಾ ಬಾಸಿನ್ ಮತ್ತಿತರರು ಉತ್ತರ ಭಾರತದಲ್ಲಿ ಬಳಸಲಾದ ಏಳು ಸಾಕ್ಷರತಾ ಪಠ್ಯಗಳನ್ನು ವಿಶ್ಲೇಷಿಸಿದ್ದಾರೆ. ಎಲ್ಲ ಪಠ್ಯಗಳು ಮಹಿಳೆಯರ ಮನೆಕೆಲಸ, ಮಕ್ಕಳ ಪೋಷಣೆ ಮತ್ತು ಕುಟುಂಬ ಯೋಜನೆಯನ್ನೇ ಕುರಿತು ಹೇಳುತ್ತವೆ. ಏಳು ಪಠ್ಯಗಳಲ್ಲಿ ಮೂರು ತಮ್ಮ ಮೊದಲ ಅಧ್ಯಾಯದಲ್ಲೇ ಮದುವೆಯ ಬಗ್ಗೆ ಹೇಳುತ್ತವೆ. ಇಲ್ಲಿ ಮಹಿಳೆಯರು ಬಹುಮುಖ್ಯವಾಗಿ ತಾಯಿಯರು. ಪಠ್ಯಗಳು ಚಿತ್ರಿಸಿದ ಮಹಿಳೆಯರ ಮಾದರಿಗಳು ವಾಸ್ತವಕ್ಕೆ ದೂರವಾಗಿದ್ದು, ಕೂಲಿಕಾರರಾಗಿ ಮತ್ತು ಕೃಷಿಕರಾಗಿ ಅವರಿಗೆ ಬೇಕಾದ ಯಾವುದೇ ಮಾಹಿತಿ ಕೊಡುವುದಿಲ್ಲ.

ವಯಸ್ಕರ ಶಿಕ್ಷಣದಲ್ಲಿ 50 ವರ್ಷಗಳ ಇತಿಹಾಸ ಹೊಂದಿರುವ ಕರ್ನಾಟಕದ ಪರಿಸ್ಥಿತಿ ಇದಕ್ಕಿಂತೇನೂ ಉತ್ತಮವಾಗಿಲ್ಲ. ರಾಜ್ಯ ಸಂಪನ್ಮೂಲ ಕೇಂದ್ರವು **ಕಲಿಯೋಣ ಬಾ** ಎನ್ನುವ ಮೂರು ಭಾಗಗಳ ಪಠ್ಯವನ್ನು ತಯಾರಿಸಿತು. ಈ ಪಠ್ಯಗಳ ವಿಶ್ಲೇಷಣೆಯಿಂದ ಕರ್ನಾಟಕದ ಬೇರೆ ಬೇರೆ ಜಿಲ್ಲೆಗಳಲ್ಲಿ ಬಳಸಲಾಗುತ್ತಿರುವ ಪಠ್ಯಗಳ ಒಂದು ಒಟ್ಟಾರೆಯಾದ ವಿಶ್ಲೇಷಣೆ ದಕ್ಕಲು ಸಾಧ್ಯ. ಏಕೆಂದರೆ ದಕ್ಷಿಣ ಕನ್ನಡ, ಬಿಜಾಪುರ, ರಾಯಚೂರು ಮತ್ತು ಮಂಡ್ಯ ಜಿಲ್ಲೆಗಳು ನಿರ್ದಿಷ್ಟ ಸ್ಥಳೀಯ ಸಾಂಸ್ಕೃತಿಕ ಪ್ರವೃತ್ತಿಗಳು ಮತ್ತು ಸಾಮಾಜಿಕ ಆರ್ಥಿಕ ಪರಿಸ್ಥಿತಿಗಳನ್ನು ಗಮನದಲ್ಲಿರಿಸಿ ಈ ಮೂಲ ಪಠ್ಯಗಳ ಅಗತ್ಯ ಬದಲಾವಣೆಗಳನ್ನು ಮಾತ್ರ ಮಾಡಿಕೊಂಡಿವೆ.

ಸಣ್ಣ ಕುಟುಂಬ, ಸ್ವಚ್ಛತೆ, ಸಮತೋಲನ ಆಹಾರ, ತಾಂತ್ರಿಕತೆಯ ಸುಧಾರಣೆ ಮುಂತಾದ ಅಂಶಗಳನ್ನು ಹೊಂದಿ ನೌಕರ ಶಾಹಿಯೆಡೆಗೆ ಪ್ರೀತಿಯಿಂದಲೇ ನೋಡುವ ಇಲ್ಲಿನ ಪಠ್ಯಕ್ರಮವು DAE ದೆಹಲಿಯನ್ನು ತನ್ನ ಹಿನ್ನಲೆಯಲ್ಲಿ ಹೊಂದಿದೆ. ಸರ್ಕಾರೀ ಸೇವೆಗಳು ಮತ್ತು ಕೃಷಿ, ಅರಣ್ಯಗಳ ಹೆಚ್ಚಿನ ಉತ್ಪತ್ತಿ ಗ್ರಾಹಕರಿಗೆ ಅರಿವು, ಸಂವಿಧಾನ, ಮಹಿಳೆಯರ ಸಮಾನತೆ ಮತ್ತು ಶಿಕ್ಷಣ ಇವೆಲ್ಲಾ ಬಹುಮುಖ್ಯ ಸ್ಥಾನ ಪಡೆಯುತ್ತವೆ ಇಲ್ಲಿ.

ಕರ್ನಾಟಕದ ವಿವಿದೆಡೆಗಳಲ್ಲಿ ಬಳಸಲಾಗುತ್ತಿರುವ ಕಲಿಕಾ ಪಠ್ಯಗಳನ್ನು ವಿಮರ್ಶೆಗೆ ಎತ್ತಿಕೊಳ್ಳುವಾಗ ಹಲವೊಂದು ಅಂಶಗಳನ್ನು ಗಮನದಲ್ಲಿರಿಸಲಾಗಿತ್ತು. ಚಿತ್ರಗಳು, ಪುರುಷ ಮತ್ತು ಮಹಿಳೆಯರ ಪಾತ್ರಗಳ ಸಂಖ್ಯೆ, ಲಿಂಗಮಾದರಿಗಳು, ಸಾಂಪ್ರದಾಯಿಕ ಮತ್ತು ಅಸಂಪ್ರದಾಯಿಕ ಪಾತ್ರಗಳ ಚಿತ್ರಣ ಮತ್ತು ವೃತ್ತಿಗಳು ಇತ್ಯಾದಿಗಳನ್ನು ಇಲ್ಲಿ ಹೆಸರಿಸಬಹುದು. ಪುರುಷ ಪಾತ್ರಗಳಿಗೆ ಹೋಲಿಸಿದಾಗ ಮಹಿಳೆಯರ ಪಾತ್ರಗಳ ಸಂಖ್ಯೆ ಎಷ್ಟಿದೆ ಮತ್ತು ಅಲ್ಲಿ ಎಂತಹ ಲಿಂಗತಾರತಮ್ಯವಿದೆ ಎಂಬುದನ್ನು ಕಂಡುಕೊಳ್ಳಲು ಪಾಠಗಳನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಿಕೊಳ್ಳಲಾಯಿತು.

(1) ನಿರ್ದಿಷ್ಟದಲ್ಲಿ ಪುರುಷ ಇಲ್ಲವೇ ಮಹಿಳಾ ಪಾತ್ರಗಳನ್ನು ಹೊಂದಿಲ್ಲದ ಸಾಮಾನ್ಯ ಪಾಠಗಳು.

(2) ಪುರುಷ ಮತ್ತು ಮಹಿಳಾ ಪಾತ್ರಗಳೆರಡನ್ನೂ ಹೊಂದಿರುವಂತಹ ಪಾಠಗಳು.

(3) ಪುರುಷ ಪಾತ್ರಗಳನ್ನಷ್ಟೇ ಹೊಂದಿರುವ ಪಾಠಗಳು ಮತ್ತು

(4) ಮಹಿಳಾ ಪಾತ್ರಗಳನ್ನಷ್ಟೇ ಹೊಂದಿರುವಂತಹ ಪಾಠಗಳು. ಮೈಸೂರು (ಕಲಿಯೋಣ ಬಾ), ಮಂಡ್ಯ (ಸವಿ ಕಲಿಕೆ) ಮತ್ತು ದಕ್ಷಿಣ ಕನ್ನಡ (ಕರಾವಳಿ ಕಲಿಕೆ) ಜಿಲ್ಲೆಗಳಲ್ಲಿ ಉಪಯೋಗಿಸಲಾದ ಪಠ್ಯಗಳಲ್ಲಿ ಕಂಡುಬರುವ ಅಂಶಗಳು ಪಟ್ಟಿಯಲ್ಲಿರುವಂತಿದೆ(ಲೇಖನದ ಕೊನೆಯಲ್ಲಿದೆ)

ಕೇವಲ ಮಹಿಳಾ ಪಾತ್ರಗಳಷ್ಟೇ ಇರುವುದು ಕೆಲವೇ ಪಾಠಗಳಲ್ಲಿ ಮತ್ತು ಕೆಲವು ಪಠ್ಯಗಳಲ್ಲಂತೂ ಒಂದೇ ಒಂದು ಪಾಠದಲ್ಲೂ ಮಹಿಳಾ ಪಾತ್ರಗಳಿಲ್ಲ. ಜತೆಗೆ ಮತ್ತು ಇಲ್ಲೆಲ್ಲಾ ತರಲಾಗಿರುವ ಮಹಿಳಾ ಪಾತ್ರಗಳು ಮುಖ್ಯ ಪಾತ್ರಗಳಾಗಿವೆ ಎಂದೇನೂ ಅಲ್ಲ. ಪಾಠದಲ್ಲಿ ಅವುಗಳ ಬಗ್ಗೆ ಎರಡನೇ ಸಲ ಪ್ರಸ್ತಾಪವಿರುವುದಿಲ್ಲ. ಆಸ್ತಿ ಮತ್ತು ಆದಾಯಗಳಿಗೆ ಸಂಬಂಧಿಸಿದ ಪಾಠಗಳ

ಶೀರ್ಷಿಕೆಗಳಲ್ಲಿ ಲಿಂಗ ತಾರತಮ್ಯ ಎದ್ದು ಕಾಣುತ್ತದೆ. ಮಹಿಳೆಯರ ಶಿಕ್ಷಣ, ಮಕ್ಕಳ ಪೋಷಣೆ ಅಥವಾ ಮದುವೆಗಳಿಗೆ ಸಂಬಂಧಿಸಿದ ಪಾಠಗಳ ಶೀರ್ಷಿಕೆಗಳು ಸಾಂಪ್ರದಾಯಕ ಮಾದರಿ ಪಾತ್ರಗಳನ್ನೇ ಎರಕ ಹೊಯ್ಯುವಂತಿರುತ್ತವೆ. ಉದಾ : "ಕಲಿತ ನಾರಿ, ಸುಖಸಂಸಾರಕ್ಕೆ ದಾರಿ" (ಕಲಿಯೋಣ ಬಾ, ಭಾಗ-1).

ಈ ಎಲ್ಲ ಪಠ್ಯಗಳಲ್ಲೂ ಪ್ರತಿ ಪಾಠದ ನಂತರವೂ ಚಟುವಟಿಕೆಗಳಿರುತ್ತವೆ. ಮಹಿಳೆಯರ ಪ್ರಸ್ತಾಪವಾಗುವಾಗೆಲ್ಲಾ ಈ ಚಟುವಟಿಕೆಗಳು ಲಿಂಗತಾರತಮ್ಯ ಸ್ವರೂಪಿಯೇ ಆಗಿರುತ್ತವೆ. 'ಸವಿ ಕಲಿಕೆ'ಯಲ್ಲಿ, ಉದಾ : ಪುರುಷರ ಕುರಿತು 36 ಬಾರಿ ಪ್ರಸ್ತಾಪಿಸಲಾಗಿದ್ದರೆ ಮಹಿಳೆಯರನ್ನು ಕುರಿತು ಪ್ರಸ್ತಾಪಿಸಲಾಗಿರುವುದು 12 ಬಾರಿ ಮಾತ್ರ.

ಕೆಳಗಿನ ಎರಡು ಚಟುವಟಿಕೆಗಳು ಪರಿಸ್ಥಿತಿಯನ್ನು ಸ್ಪಷ್ಟಪಡಿಸಬಲ್ಲವು "ಶಿವಣ್ಣನು ಅಂಗಡಿಯೊಂದರಿಂದ 5 ಕಿಲೋ 500 ಗ್ರಾಂ ಸಕ್ಕರೆ ತರುತ್ತಾನೆ. ಅದರಲ್ಲಿ "ನಾಗಮ್ಮ 4 ಕಿಲೋ 300 ಗ್ರಾಂ ಸಕ್ಕರೆಯನ್ನು ಯಾವುದೋ ತಿಂಡಿ ತಯಾರಿಸಲು ಖರ್ಚುಮಾಡುತ್ತಾಳೆ. ಈಗ ಉಳಿದಿರುವ ಸಕ್ಕರೆ ಎಷ್ಟು?" ಮತ್ತು "ನಂಜುಂಡಪ್ಪ ಟೊಮಾಟೊ ಮಾರುತ್ತಾನೆ. ಪುಟ್ಟಮ್ಮ ತನ್ನ ಹಿತ್ತಿಲಲ್ಲಿ ಟೊಮಾಟೋ ಬೆಳೆಯುತ್ತಾಳೆ" (ಸವಿ ಸುಧಾ, ಪು. 39) ಈ ಮೇಲಿನ ಉದಾಹರಣೆಗಳಲ್ಲಿ ಶಿವಣ್ಣ ಸಕ್ಕರೆ ತರುವುದು, ನಂಜುಂಡಪ್ಪ ಟೊಮಾಟೊ ಮಾರುವುದು ಮತ್ತು ನಾಗಮ್ಮ ಮನೆಯಲ್ಲಿ ತಿಂಡಿ ಮಾಡುವುದು ಅಥವಾ ಪುಟ್ಟಮ್ಮ ಹಿತ್ತಲಲ್ಲಿ ಟೊಮಾಟೋ ಬೆಳೆಯುವುದು ಮತ್ತು ಅದರ ಫಲ ಪಡೆಯದಿರುವುದು ಇವೆಲ್ಲ ವಾಸ್ತವಿಕ ಪಾತ್ರಗಳೇ ಆಗಿದ್ದು ಪುರುಷ ಮಹಿಳೆಯರ ಪಾತ್ರ ಮಾದರಿಗಳ ಪಡಿಯಚ್ಚುಗಳೇ ಆಗಿರುತ್ತವೆ.

ಅಕ್ಷರ ಕಲಿಕೆಯಲ್ಲಾಗಲೀ ಇಲ್ಲವೇ ಕಲಿಸುವಿಕೆಯಲ್ಲಿ ಅರಿವು ಜಾಗೃತಿಯನ್ನು ಒಳಗೊಳ್ಳಿಸಿಕೊಳ್ಳುವಲ್ಲಿಯಾಗಲೀ ಈ ಪಠ್ಯಗಳಲ್ಲಿ ಬಳಸಿರುವ ಚಿತ್ರಗಳು ಮುಖ್ಯ ಪಾತ್ರವಹಿಸುತ್ತವೆ. ಆದರೆ ಇಲ್ಲಿ ಎದ್ದುಕಾಣುವ ಅಂಶವೆಂದರೆ, ಕೆಲವೇ ಕೆಲವು ಚಿತ್ರಗಳಲ್ಲಿ ಮಾತ್ರ ಮಹಿಳೆಯರು ಮೂಡಿಬಂದಿರುತ್ತಾರೆ ಮತ್ತು ಅಲ್ಲೂ ಅವರು ಅಪ್ರಮುಖರೆ. ಸಾಮಾನ್ಯದಲ್ಲಿ ಕೆಲಸ ಮತ್ತು ಶ್ರಮ ಸಂಬಂಧದ ಚಿತ್ರಗಳಲ್ಲಿ ಪುರುಷ ಮತ್ತು ಮಹಿಳೆಯರು ತಮ್ಮ ತಮ್ಮ ಸಾಂಪ್ರದಾಯಕ ಮಾದರಿ ಪಾತ್ರಗಳಲ್ಲೇ ಇರುತ್ತಾರೆ. ಮಹಿಳೆಯರು ನಾಟಿ ಮಾಡುತ್ತಿರುವಂತಹ, ಹಾಲು ಕರೆಯುತ್ತಿರುವಂತಹ,ತಲೆ ಮೇಲೆ ಹುಲ್ಲುಹೊರುತ್ತಿರುವ,ಪಾತ್ರೆತೊಳೆಯುತ್ತಿರುವ,ನೀರು ಹೊರುತ್ತಿರುವ ಚಿತ್ರಗಳಿದ್ದರೆ ಪುರುಷರು ಉಳುತ್ತಿರುವ, ಹಸು ಕರೆಯುವ ಹೆಂಗಸನ್ನು ನಿಂತು ನೋಡುತ್ತಿರುವ, ನೋಟುಗಳನ್ನು ಎಣಿಸಿಕೊಳ್ಳುತ್ತಿರುವ ಚಿತ್ರಗಳಿರುತ್ತವೆ.

ಮಹಿಳೆಯರ ಶಿಕ್ಷಣಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಪಠ್ಯಗಳ ಹೆಚ್ಚು ಕಡಿಮೆ ಎಲ್ಲ ಚಿತ್ರಗಳಲ್ಲೂ ಆಕೆ ಮನೆಯಲ್ಲಿ ಮಕ್ಕಳಿಗೆ ಕಲಿಸುವುದರನ್ನೇ ತೋರಿಸಲಾಗಿದೆ. ಇಲ್ಲಿ ಕೆಲವೊಂದು ಪ್ರಶ್ನೆಗಳು ಏಳುತ್ತವೆ. ಇದು ಬೇರೆಯಾಗಿರಲು ಸಾಧ್ಯವಿಲ್ಲವೇ ? ಕಲಿತ ಮಹಿಳೆಯ ಪ್ರತಿಭೆ ಮನೆಯಲ್ಲಿ ಮಕ್ಕಳಿಗೆ ಕಲಿಸಲು ಮಾತ್ರ ಸೀಮಿತವಾಗಿರಬೇಕೇ ? ಶಿಕ್ಷಣ ಪಡೆಯುವ ಮೂಲಕ ಮಹಿಳೆಯರು ನಮ್ಮಂತಹ ಅಭಿವೃದ್ಧಿ ಹೊಂದುತ್ತಿರುವ ದೇಶದಲ್ಲಿ ಬೇರೆ ಬೇರೆ ಪಾತ್ರಗಳನ್ನು ವಹಿಸಲು ತಮ್ಮನ್ನು ಸಜ್ಜುಗೊಳಿಸಿಕೊಳ್ಳಬೇಕಾಗುತ್ತದೆಂಬುದನ್ನು ಕಲಿಯುವವರು ತಿಳಿಯುವುದು ಬೇಡವೇ ? ಪುರುಷ ಮತ್ತು ಮಹಿಳೆಯರಿಬ್ಬರನ್ನು ಒಟ್ಟಿಗೆ ತೋರಿಸಲಾಗಿರುವ ಬಹುಪಾಲು ಚಿತ್ರಗಳಲ್ಲಿ ಮಹಿಳೆ ನೆಲದ ಮೇಲೆ ಕುಳಿತಿದ್ದರೆ ಪುರುಷ ಕುರ್ಚಿಯ ಮೇಲೆಯೋ ಸೋಫಾದ ಮೇಲೆಯೋ ಕುಳಿತಿರುತ್ತಾನೆ. ಕುಟುಂಬದ ಬಗ್ಗೆ ಹೇಳಬೇಕಾದಾಗ ಗಂಡು ಮಗುವಿನ ಚಿತ್ರವೇ ಇರುತ್ತದೆ.

ಯಾವುದೇ ಪಠ್ಯಗಳಲ್ಲೂ ಯಾವೊಬ್ಬ ಮಹಿಳೆಯ ಜೀವನ ಚರಿತ್ರೆಯಿರುವುದು ಕಂಡುಬರುವುದಿಲ್ಲ. ಪಾಠಗಳಲ್ಲಾಗಲೀ ಚಿತ್ರಗಳಲ್ಲಾಗಲೀ ಕಂಡುಬರುವುದು ಲಿಂಗ ಪಡಿಯಚ್ಚುಗಳೇ. ಮಹಿಳೆಯರು ತಾಯಿಯರಾಗಿ, ಚಾಪೆ ಮತ್ತು ಬುಟ್ಟಿ ಹೆಣೆಯುವವರಾಗಿ, ಕೃಷಿ ಕೂಲಿಗಳಾಗಿ ಹಸು-ಎಮ್ಮೆ ನೋಡಿಕೊಳ್ಳುವವರಾಗಿ ಮತ್ತು ತಮ್ಮ ಮನೆ ಮಕ್ಕಳಿಗೆ ಮತ್ತು ವಯಸ್ಕ ಶಿಕ್ಷಣ ಕೇಂದ್ರದಲ್ಲಿ ಮಹಿಳೆಯರಿಗೆ ಪಾಠ ಹೇಳಿಕೊಡುವವರಾಗಿ ಮಾತ್ರ ಚಿತ್ರಿತರಾಗಿರುತ್ತಾರೆ.ಮಹಿಳೆಯರನ್ನು ಅಸಾಂಪ್ರದಾಯಕ ಪಾತ್ರಗಳಲ್ಲಿ ಕಲಿಯುವವರ ಮುಂದಿಡುವ ಪ್ರಯತ್ನಗಳೇ ಇಲ್ಲ.

ಪಾಠ್ಯ ವಿಷಯಗಳ ವಿಶ್ಲೇಷಣೆಗೆ ಹೊರಟರೂ ಮಹಿಳೆಯರ ಸಾಂಪ್ರದಾಯಕ ಪಾತ್ರಗಳೇ ಎದುರಾಗುತ್ತವೆ.

ಉದಾಹರಣೆಗೆ ಒಂದು ಪಾಠ ಹೀಗೆ ಸಾಗುತ್ತದೆ :" "ಮನೆ ; ಮನೆಯ ಕೆಲಸ ; ಕಮಲಳ ಮನೆಯ ಕೆಲಸ (ಕರಾವಳಿ ಕಲಿಕೆ, ಭಾಗ 1). ಪುರುಷರ ಆಸ್ತಿಯ ಭಾಗವಾಗಿರುವ ಮಹಿಳೆಗೆ ತನ್ನದಾದ ಆಸ್ತಿ ಇರಲಾಗದು. ಇಲ್ಲೊಂದು ಉದಾಹರಣೆ ನೋಡಿ, "ಇದು ಜೋಸೆಫನ ಕುಟುಂಬ. ಸಲೀನ ಜೊಸೆಫನ ಹೆಂಡತಿ." ಸಲೀನಾಗೆ ಅವಳ ಅಸ್ತಿತ್ವವಿರುವುದು ಜೋಸೆಫನ ಹೆಂಡತಿಯಾಗಿ ಮಾತ್ರ. ಕುಟುಂಬ ಅವನಿಗೆ ಸೇರಿದ್ದು, 'ಅವಳಿಗಲ್ಲ. ಮಹಿಳೆಯರನ್ನೂ ತೀರ್ಮಾನ ಕೈಗೊಳ್ಳುವವರಾಗಿ ಚಿತ್ರಿಸಿದ್ದೇ ಇಲ್ಲ. ಅದೇನಾದರೂ ಕೆಳಗಿನ ಸಾಲುಗಳಲ್ಲಿ ಬೇರೆಯೇ ರೀತಿಯಲ್ಲಿ ಸಾಗುತ್ತವೆ : ಶಾಲೆ ಕಲಿಯುವ ವಯಸ್ಸಿನಲ್ಲಿ ಮಕ್ಕಳು ದುಡಿಯಬೇಕಾಗಿದೆ. ಇದನ್ನು ಕಂಡ ಅವಳಿಗೆ ವಿಷಾದವಾಗುತ್ತದೆ. ತನ್ನ ವಿವೇಚನಾರಹಿತ ಕೆಲಸಕ್ಕಾಗಿ ಆಕೆ ಮರುಗುತ್ತಾಳೆ." ತನ್ನ ದೊಡ್ಡ ಕುಟುಂಬಕ್ಕೆ ಮಹಿಳೆಯೇ ಜವಾಬ್ದಾರಳು ಎಂಬಂತಹ ಅವಾಸ್ತವಿಕವಾದ ಅಭಿಪ್ರಾಯ ಮೂಡಿಸುತ್ತದೆ ಇದು. ದೇಶದಲ್ಲಿನ ಬಾಲಕಾರ್ಮಿಕ ಸಮಸ್ಯೆಯನ್ನು ಇಲ್ಲಿ ತರಲಾಗಿದ್ದು, ಅದನ್ನೂ ಅತ್ಯಂತ ಸರಳೀಕರಿಸಿ ಮಹಿಳೆಯನ್ನೇ ಅದಕ್ಕೆ ಜವಾಬ್ದಾರಳನ್ನಾಗಿ ಮಾಡಲಾಗುತ್ತದೆ.

ಕುಡಿತದಂಥ ಅತಿ ವಿಸ್ತೃತವಾದ ಸಮಸ್ಯೆಗೆ ಸುಲಭ ಪರಿಹಾರಗಳನ್ನು ನೀಡಲಾಗಿದೆ. ಅನೇಕ ಸನ್ನಿವೇಶಗಳಲ್ಲಿ ವ್ಯಕ್ತವಾಗಿರುವಂತೆ ಮಹಿಳೆಯರು ಕುಡಿತದ ಸಮಸ್ಯೆ ವಿರುದ್ಧ ಸಿಡಿದೇಳುವುದನ್ನು ಚಿತ್ರಿಸಲಾಗುವುದಿಲ್ಲ. ಬದಲಿಗೆ ಅವರನ್ನು ಅಸಹಾಯಕರಾಗಿ ನರಳುವಂತೆ ತೋರಿಸಲಾಗುತ್ತದೆ. ಬಲವಂತ ಮದುವೆಯನ್ನು ಖಂಡಿಸುವ ಪಾಠವೊಂದರಲ್ಲಿ ಮಹಿಳೆಯರ ಸಮಸ್ಯೆಯನ್ನು ತರಲಾಗಿದೆ. ಆದರೆ ಮಹಿಳೆಯೊಬ್ಬಳು ನಿರ್ಗತಿಕಳಾದಾಗ ಇಲ್ಲವೇ ಗಂಡನಿಂದ ಹಿಂಸೆಗೊಳಗಾದಾಗ ಅಗತ್ಯ ಕಾನೂನು ಸಲಹೆಯ ಬಗ್ಗೆ ಯಾವುದೇ ಚರ್ಚೆಗಳಿಲ್ಲ. ಕೆಲವು ಪಾಠಗಳಲ್ಲಿ ಲಿಂಗ ಸಮಾನತೆ, ಮಹಿಳೆಯರ ಶಿಕ್ಷಣ, ಮದುವೆಗೆ ಸೂಕ್ತ ವಯಸ್ಸು, ವರದಕ್ಷಿಣೆ ಮುಂತಾದ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳಲಾಗಿದ್ದು ಮಹತ್ವವೆನಿಸುತ್ತವೆ.

ಕೊನೆಯಲ್ಲಿ ಕೆಲವು ಪ್ರಶ್ನೆಗಳನ್ನು ಅವಶ್ಯವಾಗಿ ಎತ್ತಬೇಕಾಗುತ್ತದೆ. ವಯಸ್ಕ ಶಿಕ್ಷಣದ ಪಠ್ಯಗಳು ವಾಸ್ತವಿಕವಾಗಿರಬೇಕೇ ? ಅಂದರೆ ಅವು ಸಮಾಜವನ್ನು ಇದ್ದದ್ದು ಇದ್ದಂತೆ ಯಥಾವತ್ತಾಗಿ ಚಿತ್ರಿಸಬೇಕೇ ಅಥವಾ ಬೇರೆಯೇ ಹೇಗಿರಬೇಕೆಂಬ, ಅಂದರೆ ಮಾದರಿ ಸಮಾಜವೊಂದರ ಚಿತ್ರಣ ಕಟ್ಟಿಕೊಡಬೇಕೆ ? ವಾಸ್ತವವಾಗಿರಬೇಕೆಂದರೆ, ತನ್ನ ಬಹುಪಾಲು ಜನತೆ ಅನ್ಯಾಯ, ಅವಮಾನಗಳಿಗೆ ಒಳಗಾಗಿರುವ ಸಮಾಜವನ್ನು ಅದು ಚಿತ್ರಿಸಬೇಡವೇ ? ನೌಕರಶಾಹಿ ವ್ಯವಸ್ಥೆಯಲ್ಲಿ ಅಡಕವಾಗಿರುವ ವಕ್ರತೆಯನ್ನು ಪ್ರಶ್ನಿಸುವಂತೆ ಕಲಿಯುವವರನ್ನು ಅವು ಪ್ರೇರೇಪಿಸಬೇಡವೆ ? ಅಧಿಕಾರಿಗಳನ್ನು ಜನತೆಯ 'ಸಹಾಯಕ್ಕೆ ಸದಾ ಸಿದ್ಧ ಹಸ್ತರು' ಎಂದು ಸುಳ್ಳಾಗಿ ಚಿತ್ರಿಸುವ ಬದಲು, ವ್ಯವಸ್ಥೆ ಭ್ರಷ್ಟವಾಗಿದೆ - ಅಲ್ಲಿನ ಅಧಿಕಾರಿಗಳು ಬೇಜವಾಬ್ದಾರರು ಎಂಬ ಅಂಶವನ್ನೂ ಬಯಲಿಗೆಳೆಯುವುದು ಅವಶ್ಯವಲ್ಲವೇ ? ಕಲಿಕಾ ಪಠ್ಯಗಳು ಅಭಿವೃದ್ಧಿ ಇಲಾಖೆಗಳ ಏಜೆಂಟರೇನೋ ಎಂಬಂತೆ ಅವುಗಳಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನೂ ತುಂಬಿಬಿಡಬೇಕೇ ? ಹೌದಾದರೆ, 'ರೂಢಿಯ ಪಠ್ಯ' ಎನ್ನುವುದರ ಅರ್ಥ ಸರಕಾರೀ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪ್ರಚಾರ ಪಡಿಸುವ ಪಠ್ಯ ಎಂತಲೇ ? ಉತ್ತರ 'ಇಲ್ಲ'ವೆಂದಾದರೆ ಕಲಿಕಾ ಪಠ್ಯಗಳನ್ನು 'ಅವಶ್ಯಕತೆಗನ್ನುಸಾರ'ವಾದವುಗಳಾಗಿಸುವುದು ಹೇಗೆ ? ಪಠ್ಯಗಳನ್ನು ತೀರ್ಮಾನಿಸುವವರು ಯಾರು ? ಈ ಪಠ್ಯಗಳನ್ನು ತಯಾರಿಸುವ ಲೇಖಕರಿಗೆ ಎಷ್ಟು ಸ್ವಾತಂತ್ರ್ಯವಿರುತ್ತದೆ ? ಸಾಕ್ಷರತಾ ಕಾರ್ಯಕ್ರಮಗಳು ಜನರಿಗೆ ತಮ್ಮ ವಾಸ್ತವಿಕ ಸ್ಥಿತಿಗತಿಗಳ ಬಗ್ಗೆ ಅರಿವು ಮೂಡಿಸಬೇಕಾದರೆ ಮತ್ತು ಸಮಾಜದಲ್ಲಿ ಮಹಿಳೆಯರ ಅಸಮಾನವಾದ ಮತ್ತು ದಾಸ್ಯಕ್ಕೊಳಗಾದ ಸ್ಥಿತಿಗತಿಯಲ್ಲಿ ಬದಲಾವಣೆಯಾಗಬೇಕಾದರೆ, ಮಹಿಳೆಯನ್ನು ಅವರ ಸಾಂಪ್ರದಾಯಿಕ ಮಾದರಿ ಪಾತ್ರಗಳಲ್ಲೇ ಎರಕಹೊಯ್ಯಬೇಕೆ ? ಸದ್ಯದ ಸಮಾಜದಲ್ಲಿ ಒಂದು ಹೊಸ ಮೌಲ್ಯ ವ್ಯವಸ್ಥೆ ತರಬೇಕಾದರೆ ಮಹಿಳೆಯರನ್ನು ಅಸಾಂಪ್ರದಾಯಿಕ ಪಾತ್ರಗಳಲ್ಲಿ ಚಿತ್ರಿಸುವುದು ಅವಶ್ಯವಲ್ಲವೇ ? ಸುಶಿಕ್ಷಿತ ಮಹಿಳೆಗೆ ಭವಿಷ್ಯತ್ತಿನಲ್ಲಿರಬಹುದಾದ ಬೇರೆ ಬೇರೆ ಸಾಧ್ಯತೆಗಳನ್ನು ಪುರುಷ ಮತ್ತು ಮಹಿಳೆಯರಿಬ್ಬರೂ ತೆಗೆದುಕೊಳ್ಳುವುದು ಅವಶ್ಯವಲ್ಲವೇ ? ಮಹಿಳೆಯರು ಒಟ್ಟು ಜನಸಂಖ್ಯೆಯ ಅರ್ಧದಷ್ಟಿರುವಾಗ ಅವರನ್ನು ಅಲ್ಪಸಂಖ್ಯಾತರನ್ನಾಗಿ ತೋರಿಸುವುದು, ಅಪ್ರಮುಖರನ್ನಾಗಿಸುವುದಾದರೂ ಯಾತಕ್ಕೆ ? ಮಹಿಳೆಯರನ್ನು ಅಧೀನ ಸ್ಥಿತಿಯಲ್ಲೇ ಚಿತ್ರಿಸುವುದಾದರೆ ಅಲ್ಲಿ ಸಮಾನತೆಯನ್ನು ಕುರಿತು ಹೇಳುವುದಾದರೂ ಯಾತಕ್ಕೆ ?

ವಯಸ್ಕ ಶಿಕ್ಷಣಕ್ಕೆ ಬಳಸಲಾಗುವ ಪಠ್ಯ ಕ್ರಮವನ್ನು ಸರ್ಕಾರದ ಸಿದ್ಧ ವಿಷಯಗಳಿಗನುಸಾರ ತಯಾರಿಸ ಕೂಡದು. ಯಾರ ಕಲಿಕೆಗಾಗಿ ಅದನ್ನು ತಯಾರಿಸಲಾಗುತ್ತದೆಯೋ ಆ ಪ್ರದೇಶದ ಸಾಮಾಜಿಕ-ಆರ್ಥಿಕ ಮತ್ತು ಸಾಂಸ್ಕೃತಿಕ ಸನ್ನಿವೇಶಗಳಿಗೆ ಪಕ್ಕಾಗಿರುವಂತಹ ಸಮಾಜ ಕಾರ್ಯಕರ್ತರಿಂದಲೇ ಅವುಗಳ ರಚನೆಯಾಗಬೇಕು. ಕಲಿಯುವವರೇ ಪಠ್ಯಕ್ರಮದ ರಚನೆಯಲ್ಲೂ ಭಾಗಿಗಳಾಗಿಳಾಗಿರುವ ರೀತಿಯಲ್ಲಿ ಅವಶ್ಯಕತೆಗನುಸಾರವಾದ ಪುಸ್ತಕಗಳ ರಚನೆಯಾಗಬೇಕು. ತಾವು ಕಲಿಯಬೇಕಾಗಿರುವ ವಿಷಯಗಳ ಸಂಬಂಧದಲ್ಲಿ ಕಲಿಯುವವರು ಸಕ್ರಿಯವಾಗಿ ಪಾಲ್ಗೊಳ್ಳುವಂತಹ ಧೋರಣೆ ಈಗಾಗಲೇ ಮಹಿಳಾ ಸಮಖ್ಯಾ ಮುಂತಾದ ಗುಂಪುಗಳಲ್ಲಿ ಕಂಡುಬರುತ್ತಿದೆ.

ಸರ್ಕಾರ ಹಮ್ಮಿಕೊಂಡ ಅಭಿವೃದ್ಧಿ ಯೋಜನೆಗಳ ಪ್ರಚಾರಕ್ಕೇನೋ ಎಂಬಂತೆ ಪಠ್ಯಗಳನ್ನು ಬಳಸಿಕೊಳ್ಳಲಾಗುತ್ತಿದೆ. ಮಾಹಿತಿಗಳನ್ನು ಮತ್ತು ಸಂದೇಶಗಳನ್ನು ಸಿದ್ಧ ಸತ್ಯಗಳರೀತಿಯಲ್ಲಿ ರವಾನಿಸುವ ಬದಲು, ಸಮಾಜದಲ್ಲಿ ಮಹಿಳೆಯರ ಸ್ಥಿತಿಗತಿಗಳನ್ನು ಪಾತ್ರಗಳನ್ನೂ ಪ್ರಶ್ನಿಸಲು ಮತ್ತು ಪ್ರತಿಭಟಿಸಲು ಅನುವಾಗುವಂತಹ ಚರ್ಚೆಗಳನ್ನು ಉದ್ದೀಪಿಸುವಂತಿರಬೇಕು ಈ ಪಠ್ಯಗಳು. ಮಹಿಳೆಯರನ್ನು ಸಾಂಪ್ರದಾಯಿಕ ಮಾದರೀ ಪಾತ್ರಗಳಿಗೆ ಅಚ್ಚೊತ್ತಿಸುವ ಬದಲು ಉತ್ತಮ ಸ್ಥಾನಮಾನವನ್ನುಳ್ಳ ಹೊಸ ಸಮಾಜದ ಕಲ್ಪನೆಯೊಂದು ಅವರಿಗೆ ಮೂಡುವ ರೀತಿಯ ಸೂಕ್ತ ಚಿತ್ರಗಳನ್ನೊಳಗೊಂಡ ಹೊಸ ಮಾದರಿಗಳನ್ನು ಹುಟ್ಟುಹಾಕಬೇಕು. ಪುರುಷ ಮತ್ತು ಮಹಿಳೆಯರಿಬ್ಬರೂ ತಮ್ಮ ಬಗ್ಗೆ ಹೊಂದಿರುವ ಮನೋಭಾವಗಳ ಬದಲಾವಣೆಗಳನ್ನು ತರುವಲ್ಲಿ ಪರಿಣಾಮಕಾರೀ ಸಾಧನಗಳಾಗಬೇಕು ಪಠ್ಯ ಪುಸ್ತಕಗಳು. ಹಾಗೆ ಅವುಗಳ ರಚನೆ ಹಾಗಿರಬೇಕು. ಪಠ್ಯ ಪುಸ್ತಕಾ ರಚನಾ ಸಮಿತಿಯಲ್ಲಿ ಅರ್ಧದಷ್ಟಾದರೂ ಸ್ತ್ರೀ ಸಂವೇದನಾ ದೃಷ್ಟಿಯುಳ್ಳ ಮಹಿಳೆಯರಿರಬೇಕು. ಅವರು ಅಕಡೆಮಿಕ್ ಹಿನ್ನೆಲೆಯವರೇ ಆಗಿರಲಿ, ಕಾರ್ಯಕರ್ತೆಯರೇ ಆಗಿರಲಿ ಒಟ್ಟಿನಲ್ಲಿ ಈ ಸಾಕ್ಷರತಾ ಕಾರ್ಯಕ್ರಮಗಳು ಯಾರನ್ನು ಮನಸ್ಸಿನಲ್ಲಿಟ್ಟುಕೊಂಡಿರುತ್ತವೆಯೋ ಅಂತಹವರ ಮುಂದಿರುವ ಸಮಸ್ಯೆಗಳಿಗೆ, ಸವಾಲುಗಳಿಗೆ ತೆರೆದ ಮನಸ್ಸಿನಿಂದಿರುವವರಾಗಬೇಕು. ಇದು ಬಹಳ ಅವಶ್ಯಕ.

– ಪಟ್ಟಿ –

| ಪಠ್ಯ ಪುಸ್ತಕ | ಒಟ್ಟು ಪಾಠಗಳ ಸಂಖ್ಯೆ | ಸಾಮಾನ್ಯ ಪಾಠಗಳು | ಪುರುಷ ಮತ್ತು ಮಹಿಳೆಯರಿಬ್ಬರ ಪಾತ್ರಗಳು | ಪುರುಷ ಪಾತ್ರಗಳು | ಮಹಿಳಾ ಪಾತ್ರಗಳು |
|---|---|---|---|---|---|
| ಕಲಿಯೋಣ ಬಾ | | | | | |
| **I, II ಮತ್ತು III** | 42 | 19 | 4 | 17 | 2 |
| ಕರಾವಳಿ ಕಲಿಕೆ | | | | | |
| **I, II ಮತ್ತು III** | 64 | 44 | 7 | 9 | 4 |
| ಸಲಿ ಕಲಿಕೆ | | | | | |
| **I, II, III ಮತ್ತು IV** | | | | | |



# ಕೇರಳದ ಕಮ್ಯುನಿಸ್ಟರಿಗೆ ದುಃಸ್ವಪ್ನವಾಗಿರುವ ಕೆ. ಆರ್. ಗೌರಿ

1957 ಮೇ, ಕೇರಳದ ಕಮ್ಯೂನಿಸ್ಟರಿಗೆ ಪ್ರತಿಷ್ಠೆಯ ದಿನಗಳು. ಆಗಷ್ಟೆ ಕಮ್ಯೂನಿಸ್ಟ್ ಸರ್ಕಾರ ಬಹುಜನ ಮತಧಿಂದ ಆರಿಸಲ್ಪಟ್ಟಿತ್ತು. ಅದೇ ಮೇ ಮೂವತ್ತು. ಶುಕ್ರವಾರ ಸಿ.ಪಿ.ಐ.ನ ಕಟ್ಟಾಳುಗಳು ಟ್ರಿವಾಂಡ್ರಂ ಮಂತ್ರಿನಿವಾಸವೊಂದರಲ್ಲಿ ಸೇರಿದ್ದರು. ಅದೊಂದು ಖಾಸಗೀ ಭೇಟಿಯಾಗಿತ್ತು. ಪಕ್ಷದ ಆದೇಶದ ಮೇರೆಗೆ ಇಬ್ಬರು ಕಾಮ್ರೇಡ್‌ಗಳ ಮದುವೆ ಅಲ್ಲಿ ನಡೆಯಲಿತ್ತು. ಮದುವೆ ಗಂಡು ಟಿ.ವಿ. ಥಾಮಸ್, ಸಾರಿಗೆ ಮಂತ್ರಿಯಾಗಿದ್ದ ಅವರು ಬಿಳಿಯ ಜುಬ್ಬ ಧೋತಿ ಉಟ್ಟು, ಮದುಮಗನಾಗಿ ಬಂದಿದ್ದರು. ಕಪ್ಪು ಬಿಳುಪಿನ ಸೀರೆ ರವಿಕೆ ತೊಟ್ಟಿದ್ದ ವಧು ಕಂದಾಯ ಸಚಿವೆ. ಪುರೋಹಿತರಿಲ್ಲ, ಮಂತ್ರಗಳಿಲ್ಲ, ಉಂಗುರ ಹಾಗೂ ಹಾರ ಬದಲಾಯಿಸಿಕೊಂಡ ಈ ಸರಳ ಮದುವೆ ಸಮಾರಂಭವನ್ನು ಪಕ್ಷದ ಅಧ್ಯಕ್ಷ ಕೆ.ಸಿ. ಜಾರ್ಜ್ ಅವರು ನಡೆಸಿದರು. ಕಣ್ಣಲ್ಲಿ ಹೆಮ್ಮೆಯ ಹೊಳಪು ತುಂಬಿಕೊಂಡು ನಿಂತಿದ್ದವರು ಕೇರಳದ ಕ್ರುಶ್ಚೇವ್ ಎನಿಸಿಕೊಂಡಿದ್ದ ಎಂ. ಎನ್. ಗೋವಿಂದನ್ ನಾಯರ್. ಆ ಮಂತ್ರಿ ವಧುವೇ ಕಳಲೆಲ್ ರಾಮನ್ ಗೌರಿ ಅಮ್ಮ ಅಥವಾ ಕೆ. ಆರ್. ಗೌರಿ. ವಧುವಿನ ವಯಸ್ಸು 38, ವರನ ವಯಸ್ಸು 47. ಇಬ್ಬರೂ ತಮ್ಮ ವೈಯಕ್ತಿಕ ಜೀವನದ ಸುಖ ಸಂತೋಷವನ್ನೇ ಮರೆತಂತಿದ್ದರು. ಆದರೆ ಅದು ಪಕ್ಷದ ಜ್ಞಾಪಕದಲ್ಲಿತ್ತು. ಗೌರಿ ಆಗ ಕಮ್ಯೂನಿಸ್ಟ್ ಪಕ್ಷದ ಮೆಚ್ಚಿನ ಕಣ್ಮಣಿ. ಆದರೆ ಇಂದು ವಾತಾವರಣ ಬದಲಾಗಿದೆ. ಅಂದು ಪಕ್ಷದ ಸಂಘಟನೆಗೆ ಅನಿವಾರ್ಯವಾಗಿದ್ದ ಗೌರಿಗೆ ಇಂದು 74 ವಯಸ್ಸು. ಅಶಿಸ್ತು, ಪಕ್ಷದ ಬಿಕ್ಕಟ್ಟಿಗೆ ಕಾರಣವಾಗಿದ್ದಾರೆಂದು ಆರೋಪವನ್ನು ಹೊರಿಸಿ ಅವರನ್ನು ಪಕ್ಷದಿಂದ ಹೊರ ಹಾಕಲಾಗಿದೆ. ಈಗ ಅವರು ಸ್ವಮತಭ್ರಷ್ಟರ ಸಾಲಿನಲ್ಲಿ ಇದ್ದಾರೆ.

ಥಾಮಸ್, ಗೌರಿ ಇಬ್ಬರೂ ಆಶಾವಾದಿ ಕಮ್ಯೂನಿಸ್ಟರು. ಇಬ್ಬರು ಒಟ್ಟಿಗೆ ಕೆಲಸ ಮಾಡಿದವರು ಮದುವೆಯಾದರು, ಒಟ್ಟಿಗೆ ಬದುಕಿದವರು. ಪಕ್ಷದ ಆದೇಶದ ಮೇರೆಗೆ ಬೇರೆಯೂ ಆದರು. 1964ರಲ್ಲಿ ಪಕ್ಷ ಒಡೆದಾಗ ಥಾಮಸ್ ಸಿ.ಪಿ.ಐನಲ್ಲಿ ಉಳಿದರು. ಪಕ್ಷ ಅವರಿಬ್ಬರ ವೈಯಕ್ತಿಕ ಜೀವನದ ತೀರ್ಮಾನ ತೆಗೆದುಕೊಳ್ಳುವ ನೆಲೆಯಾಯಿತು. ಪಕ್ಷದ ನಿರ್ದೇಶನದಲ್ಲೇ ವೈಯಕ್ತಿಕ ಜೀವನವನ್ನು ರೂಪಿಸಿಕೊಂಡವರು, ತಮ್ಮ ಜೀವನದ ಅಮೂಲ್ಯ ತೀರ್ಮಾನಗಳನ್ನೆಲ್ಲಾ ಪಾರ್ಟಿಯ ಕೈಗೆ ಒಪ್ಪಿಸಿದ್ದರು. ಇದು ಎಲ್ಲಿಯ ತನಕವಿತ್ತೆಂದರೆ ರಾಜಕೀಯವಾಗಿ ಅವರಿಬ್ಬರೂ ಬಡಿದಾಡಿದರು. 1977ರಲ್ಲಿ ಥಾಮಸ್ ಸಾಯುವ ಕೊನೆಯ ಗಳಿಗೆಯಲ್ಲೂ ಗೌರಿಗೆ ಅವರನ್ನು ಹೋಗಿ ಭೇಟಿ ಮಾಡುವ ಅವಕಾಶವನ್ನು ಪಕ್ಷ ಮಾಡಿಕೊಡಲಿಲ್ಲ. ಅಂತಹ ಸ್ಥಿತಿಯಲ್ಲೂ ಗೌರಿ ಪಕ್ಷದ ಆದೇಶವನ್ನು, ಅಪ್ಪಣೆಯನ್ನು ಮರುಮಾತಿಲ್ಲದೆ ಪಾಲಿಸಿದ್ದರು. ಅಂದು ಪಾರ್ಟಿಯ ಏಳಿಗೆಗೆ ತನ್ನೆಲ್ಲಾ ವೈಯಕ್ತಿಕ ಜೀವನವನ್ನು ಮೂಲೆಗೊತ್ತಿ ನಿಯತ್ತಿನಿಂದ ದುಡಿದ ಗೌರಿಯನ್ನು ಪಕ್ಷದ ಶಿಸ್ತನ್ನು ಉಲ್ಲಂಘಿಸಿದ್ದಾರೆಂದು, ಪಕ್ಷಕ್ಕೇ ವಿರುದ್ಧವಾಗಿ ನಡೆದುಕೊಂಡಿದ್ದಾರೆಂದು ಆಪಾದಿಸಿದೆ.

ಸಾಮಾಜಿಕ ಕಳಕಳಿಗಾಗಿ ಪ್ರಾಮಾಣಿಕವಾಗಿ ಅರ್ಪಿಸಿಕೊಂಡ ಈ ಗಂಡ-ಹೆಂಡಿರ ನಿರಾಶೆಯ ಕತೆ ತಿಳಿದಿರುವುದು ತುಂಬಾ ಕಡಿಮೆ ಜನರಿಗೆ. 1967ರಲ್ಲಿ ಇ.ಎಂ.ಎಸ್ ಸರ್ಕಾರ ಅವರ ಮೇಲೆ ಹೊರೆಸಿದ ಹಲವಾರು ಗುರುತರವಾದ ಆಪಾದನೆಯಿಂದ ಥಾಮಸ್ ವೇದನೆಗೊಳಗಾದರು. ಅವರ ಮೇಲೆ ಹೊರಿಸಿದ ಆಪಾದನೆಗಳಲ್ಲಿ ಹುರುಳಿಲ್ಲವೆಂದು ತಿಳಿಯುವ ವೇಳೆಗೆ ಥಾಮಸ್ ಮರಣವನ್ನಪ್ಪಿದರು.

1919ರಲ್ಲಿ ಜನಿಸಿದ ಗೌರಿ ಎರವ ಹಿಂದುಳಿದ ಜಾತಿಗೆ ಸೇರಿದವರು. ಒಳ್ಳೆಯ ಭವಿಷ್ಯವಿದ್ದ ವಕೀಲ ವೃತ್ತಿಯನ್ನು ತೊರೆದು ಆಗಷ್ಟೇ ಅಂಕುರಿಸುತ್ತಿದ್ದ ಕಮ್ಯೂನಿಸಂನ್ನು ಅಪ್ಪಿಕೊಂಡರು. ಎರವ ಜಾತಿಗೆ

ಸೇರಿದ ಕಮ್ಯೂನಿಸ್ಟ ನಾಯಕ ಸಿ.ಜಿ. ಸದಾಶಿವನ್ ಅವರ ಪ್ರೇರಣೆಯಿಂದ ಗೌರಿ ರಾಜಕೀಯಕ್ಕಿಳಿದರು. ಸ್ವಾತಂತ್ರ್ಯದ ಮುಂಚಿನ ದಿನಗಳಲ್ಲಿ ಸಮಾಜವಾದ, ಜಮೀಂದಾರಿ ಪದ್ಧತಿಯನ್ನು ವಿರೋಧಿಸುವಂತಹ ವಿಷಯಗಳು ಮೇಲ್ಜಾತಿ ಹಾಗೂ ದಲಿತರನ್ನು ಹೆಚ್ಚು ಆಕರ್ಷಿಸಿದವು. ನಾಯರ್‌ಗಳಿಗಿಂತ ಕೆಳಗಿನ, ಹರಿಜನರಿಗಿಂತ ಮೇಲಿನವರಾದ ಎರವರು ಹೆಚ್ಚಿನ ಸಂಖ್ಯೆಯಲ್ಲಿ ಕಮ್ಯೂನಿಸ್ಟ ಚಳುವಳಿಯಲ್ಲಿ ಕ್ರಿಯಾಶೀಲರಾಗಿ ಧುಮುಕಿದರು. ಈಗಲೂ ಕಮ್ಯೂನಿಸ್ಟ ಪಕ್ಷದಲ್ಲಿ ಎರವರದು ಕೇಂದ್ರ ಪಾತ್ರ. ಅವರಲೊಬ್ಬರಾದ ಗೌರಿ ರಾಜಕೀಯದಲ್ಲಿ ಮುಂದೆ ಬರಲು ಹಲವಾರು ಅಡ್ಡಿ ಆತಂಕಗಳನ್ನು ಎದುರಿಸಬೇಕಾಯ್ತು. ಸೆರೆಮನೆವಾಸವನ್ನು ಗೌರಿಯವರು ಎದುರಿಸಬೇಕಾಯಿತು.

ಕಮ್ಯುನಿಸ್ಟ ಪಕ್ಷದಲ್ಲೂ ಪಿತೃಪ್ರಧಾನತೆಯನ್ನು ವಿರೋಧಿಸುವ ಮಹಿಳಾ ಬಂಡಾಯಗಾರ್ತಿಯರ ಪ್ರತಿನಿಧಿಯಾದರು ತರುಣಿ ಗೌರಿ. ಪಕ್ಷದ ಉನ್ನತ ಸ್ಥಾನದಲ್ಲಿದ್ದ ಗೌರಿಯವರು ಕೆಳವರ್ಗದವರ ಧೈರ್ಯ ಭರವಸೆಯ ಸಂಕೇತವಾಗಿದ್ದರು. ಆಕೆಯ ಕ್ಷೇತ್ರದ ಜನರು ಗೌರಿಯನ್ನು 11 ಬಾರಿ ಅಸೆಂಬ್ಲಿಗೆ ಆಯ್ಕೆ ಮಾಡಿದರು. ಮೇಲು ನೋಟಕ್ಕೆ ಒರಟು ಹಾಗೂ ಮುಂಗೋಪಿಯಂತೆ ಕಾಣುತ್ತಿದ್ದ ಗೌರಿಯವರ ಮನದ ಒಳಗೆ ಜನರ ಬಗ್ಗೆಯಿದ್ದ ಪ್ರೀತಿ ವಿಶ್ವಾಸವನ್ನು ಜನರು ಗುರುತಿಸಿದ್ದರು.

ಅವರ ಎಲ್ಲಾ ಕಾರ್ಯಗಳಲ್ಲಿ ಸರಳತೆ ಎದ್ದು ಕಾಣುತ್ತಿತ್ತು. ಚುನಾವಣಾ ಪ್ರಚಾರದ ಶೈಲಿ. ಇತರ ರಾಜಕೀಯ ಪಕ್ಷದ ಅಭ್ಯರ್ಥಿಗಳು ಹಾಗೂ ತಮ್ಮದೇ ಪಕ್ಷದವರು ಚುನಾವಣೆಯ ಸಂದರ್ಭದಲ್ಲಿ ಲಕ್ಷಾಂತರ ರೂಗಳನ್ನು ಖರ್ಚುಮಾಡಿದರೆ ಗೌರಿಯಮ್ಮ ಅವರ ಕ್ಷೇತ್ರಕ್ಕೆ ಒಬ್ಬರೇ ಹೋಗುತ್ತಿದ್ದರು, ಯಾರದಾದರೂ ಒಬ್ಬರ ಮನೆಯಲ್ಲಿ ಊಟಮಾಡಿ ನೆರೆಕೆರೆಯವರನ್ನೆಲ್ಲಾ ಕರೆಸುತ್ತಿದ್ದರು. ಅವರ ಸಮಸ್ಯೆಗಳನ್ನು ಕುರಿತು ಮಾತನಾಡುತ್ತಿದ್ದರು. ಅವರ ಸುಖ-ದುಃಖಗಳನ್ನು ಹಂಚಿಕೊಳ್ಳುತ್ತಿದ್ದರು. ಕಾಟ ಕೊಡುವ ಗಂಡಂದಿರ ಬಗ್ಗೆ, ಮಕ್ಕಳ ಬಗ್ಗೆ ವಿಚಾರಿಸುತ್ತಿದ್ದರು. ಈಡೇರಿಸಲಾಗದ ಯಾವ ಭರವಸೆಗಳನ್ನು ಅವರು ಜನರಿಗೆ ನೀಡುತ್ತಿರಲಿಲ್ಲ ಮತವನ್ನು ಯಾಚನೆ ಮಾಡುತ್ತಿರಲಿಲ್ಲ. ಅವರ ಮೇಲೆ ಜನರು ಇಟ್ಟಿದ್ದ ಭರವಸೆಗಳಿಂದಾಗಿ ಅವರು ವಿಜಯಶಾಲಿಯಾಗುತ್ತಿದ್ದರು. ಅಷ್ಟೇ ಜನಪ್ರಿಯತೆ ಇದ್ದ ಮತ್ತೊಬ್ಬ ವ್ಯಕ್ತಿಯೆಂದರೆ 'ನಾಯರ್' ನಾಯಕರಾದ ಮನ್ನತ ಪದ್ಮನಾಭನ್.

ಕೇರಳದ ದಲಿತರು ಗೌರಿಯಮ್ಮ ಅವರ ಬಗ್ಗೆ ಅಪಾರ ಗೌರವ ಹಾಗೂ ಕೃತಜ್ಞತೆ'ಯನ್ನು ಹೊಂದಿದ್ದಾರೆ. ನಾಲ್ಕು ಬಾರಿ ಸಚಿವರಾಗಿದ್ದ ಅವರು ಕೃಷಿ ಕ್ಷೇತ್ರದಲ್ಲಿ ತಂದ ಕ್ರಾಂತಿಕಾರಕ ಬದಲಾವಣೆಯ ಮೂಲಕ ಅವರ ಜೀವನದಲ್ಲಿ ತಂದ ಬದಲಾವಣೆಗಾಗಿ ಗೌರಿಯಮ್ಮನನ್ನು ಸ್ಮರಿಸುತ್ತಾರೆ. ಜೀತಗಾರಿಕೆಯಿಂದ ಮುಕ್ತ ಮಾಡಿ ಉಳುವವರಿಗೆ ಒಡೆತನದ ಹಕ್ಕನ್ನು ಕಾಯಿದೆ ನೀಡಿದೆ. ಪಕ್ಷದ ಹಿರಿಯರಿಗೂ ಗೌರಿಯವರಿಗೂ ನಡುವಿನ ಹೋರಾಟ ಹತ್ತು ವರ್ಷಗಳ ಹಿಂದೆಯೇ ಪ್ರಾರಂಭವಾಯಿತು. ಮದ್ಯಪಾನದ ಲೈಸೆನ್ಸ್ ವಿಷಯವಾಗಿ ಪಕ್ಷದ ನಡುವೆ ಹಾಗೂ ಗೌರಿಯಮ್ಮ ಅವರ ಮಧ್ಯೆ ಭಿನ್ನಾಭಿಪ್ರಾಯ ಉಂಟಾಗಿತ್ತು. ಅಬಕಾರಿ ಸಚಿವರಾಗಿದ್ದಾಗ ಪಕ್ಷಕ್ಕಾಗಿ ಅಬ್ಕಾರಿ ಕಾಂಟ್ರಾಕ್ಟರುಗಳಿಂದ ಹಣ ಸಂಗ್ರಹಿಸುವುದಿಲ್ಲವೆಂಬ ಕಾರಣದಿಂದಾಗಿ ಮುಂದೆ ಆ ಪದವಿಯನ್ನು ಕಳೆದುಕೊಂಡರು. ಅವರ ಕೈಗಾರಿಕಾ ನೀತಿಯು ಬಂಡವಾಳಶಾಹಿ ಸ್ವರೂಪವನ್ನು ಹೊಂದಿದೆಯೆಂದು ಇದರಿಂದ ಕಾರ್ಮಿಕರ ಸಂಘಟನಾ ಚಳುವಳಿಯನ್ನು ಕುಂಠಿತಗೊಳಿಸಲಾಗುತ್ತಿದೆಯೆಂಬ ಆರೋಪವನ್ನು ಅವರ ಮೇಲೆ ಮಾಡಲಾಯಿತು. ಗೌರಿಯವರೆ ಮುಂದಿನ ಮುಖ್ಯಮಂತ್ರಿ ಎಂಬ ಪ್ರಚಾರದೊಂದಿಗೆ ಪಕ್ಷ ಚುನಾವಣೆಯಲ್ಲಿ ಗೆದ್ದು ನಂತರ ಅವರನ್ನು ಮೂಲೆಗೊತ್ತಲಾಯಿತು.

ಪಕ್ಷದವರ ಬಹುಪಾಲು ಜನರ ಅಭಿಪ್ರಾಯದಂತೆ ಪಕ್ಷ ಗೌರಿಯಮ್ಮನ ಮೇಲೆ ತೆಗೆದುಕೊಂಡ ನಿಲುವಿಗೆ ಕಾರಣ ಗೌರಿಯಮ್ಮ ಅವರ ನೇರ ನಡವಳಿಕೆ ಹಾಗೂ ಅವರ ಮುಂಗೋಪ ಸ್ವಭಾವ. ಪಕ್ಷದ ಸಭೆಗಳಲ್ಲಿ ಬಹಿರಂಗವಾಗಿ ಇ.ಎಂ.ಎಸ್ ಅವರನ್ನು ಟೀಕಿಸುತ್ತಿದ್ದುದು ಕೂಡಾ ಈ ಸಮಸ್ಯೆಗೆ ಕಾರಣವಾಯಿತು. ಪಕ್ಷದಿಂದ ಹೊರ ಹಾಕಲಾದ ಗೌರಿಯಮ್ಮ ಪಕ್ಷದ ವಿರೋಧಿಗಳಾದ ಕರುಣಾಕರನ್ ಹಾಗೂ ಎಂ. ವಿ. ರಾಘವನ್ ಅವರನ್ನು ಭೇಟಿಯಾಗುತ್ತಿದ್ದರೆಂಬ ಕಾರಣವನ್ನು ನೀಡಲಾಯಿತು. ಹಿಂದೆ ಸಿ.ಪಿ.ಎಂ. ನವರಾಗಿದ್ದ ಇಂದು ಸಹಕಾರಿ ಸಚಿವರಾದ ರಾಘವನ್ ಅವರು

## ಅಜಿತ ಕಂಡಂತೆ "ಗೌರಿಯಮ್ಮ"

ಅಜಿತ ಕೇರಳದ ದಂತ ಕತೆಯ ನಾಯಕಿ 'ಸಾಮಾಜಿಕ ಪ್ರಜ್ಞೆ'ಯನ್ನು ಹೊಂದಿದ ಬಿಸಿರಕ್ತದ ಯುವ ಹೃದಯಗಳ ರೋಮಾಂಚಕಾರಿ ನಾಯಕಿ. 'ನಕ್ಸಲೈಟ್' ಆಗಿದ್ದ, ಅಜಿತ ಇಂದು ನಕ್ಸಲ್‌ವಾದದ ಅತಿರೇಕದ ಪರಿಧಿಯಿಂದ ಹೊರ ಬಂದಿದ್ದಾರೆ. ಆದರೆ ಅವರಿಗಿರುವ ಸಾಮಾಜಿಕ ಕಳಕಳಿ ಎಳ್ಳಷ್ಟು ಕಡಿಮೆಯಾಗಿಲ್ಲ. ತಿರುಪತಿಯಲ್ಲಿ ನಡೆದ 5ನೇ ರಾಷ್ಟ್ರೀಯ ಮಹಾ ಸಮಾವೇಶದ 'ರಾಜಕೀಯ ಹೋರಾಟದ ಸಂಘಟನೆ, ಎಂಬ ವಿಚಾರ ಗೋಷ್ಠಿಯಲ್ಲಿ ತಮ್ಮ ಆಲೋಚನೆಗಳನ್ನು ಹಂಚಿಕೊಂಡ ಅಜಿತಾ ಕೇರಳದ ರಾಜಕೀಯ, ಆರ್ಥಿಕ, ಸಾಮಾಜಿಕ ಸನ್ನಿವೇಶದಲ್ಲಿ ಮಹಿಳೆಯರ ಹೋರಾಟದ ಸ್ವರೂಪವನ್ನು ಚರ್ಚಿಸಿದರು. ಅವರ ಈ ಚರ್ಚೆಯು ಕಮ್ಯೂನಿಸ್ಟ್ ಪಕ್ಷದಿಂದ ಹೊರಹಾಕಲ್ಪಟ್ಟ ಗೌರಿಯಮ್ಮ ಹಾಗೂ ಪರ್ಯಾಯ ರಾಜಕೀಯ ಆಲೋಚನೆಯ ಸುತ್ತ ಕೇಂದ್ರಿತವಾಗಿತ್ತು. ಅಜಿತ ಹಾಗೂ ಗೌರಿಯಮ್ಮ ಅವರ ಆಲೋಚನೆಯಲ್ಲಿ ಸಮಾನತೆಯ ಅಂಶಗಳಿವೆ.

1990ರ ವೇಳೆಯಲ್ಲಿ ಕೇರಳದಲ್ಲಿನ ಎಲ್ಲಾ ಗುಂಪುಗಳು ಕ್ರಿಯಾಶೀಲತೆಯನ್ನು ಕಳೆದುಕೊಂಡಿದ್ದವು. ಕೆ.ಎಸ್.ಎಸ್.ಪಿ. ಹಾಗೂ ಸ್ವಾಯತ್ತ ಮಹಿಳಾ ಚಳವಳಿಗಳನ್ನು ಸಿ.ಪಿ.ಎಂ. ತನ್ನ ವಲಯದಲ್ಲಿ ಸೇರಿಸಿಕೊಳ್ಳುವ ಪ್ರಯತ್ನವನ್ನು ನಡೆಸಿತು. ಇಂದು ಸ್ತ್ರೀಯರು ರಾಜಕೀಯ ಮುಂಚೂಣಿಯಲ್ಲಿ ಇರಬೇಕಾದದು ಅತ್ಯಗತ್ಯವಾಗಿದೆ. ಎಲ್ಲಾ ಕ್ಷೇತ್ರಗಳಲ್ಲೂ ಸ್ತ್ರೀಯರಾಗಿ ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡಬೇಕಾಗಿದೆ. ನಮ್ಮ ಮಾರ್ಕ್ಸ್‌ವಾದಿ ಪಕ್ಷಗಳು ಇಂತಹ ಆಲೋಚನೆಯನ್ನೇ ಅನುಮಾನದಿಂದ ನೋಡುವಂತಹ ವಾತಾವರಣ ನಮ್ಮಲ್ಲಿದೆ ಎಂದು ಭಾವಿಸುವ ಅಜಿತ ಸ್ತ್ರೀಯರನ್ನು ಹಾಗೂ ಸ್ತ್ರೀ ಸಂಘಟನೆಗಳನ್ನು ಮುಖ್ಯ ರಾಜಕೀಯ ವಾಹಿನಿಯಿಂದ ದೂರವಿಡುವವರೆಗೆ ಸ್ತ್ರೀಯರ ಸಮಸ್ಯೆಗಳನ್ನು ನಿರ್ಲಕ್ಷಿಸುವುದು ಮುಂದುವರಿಯುತ್ತದೆಯೆಂದು ಭಾವಿಸುತ್ತಾರೆ. ಸ್ತ್ರೀಯರು ತಮ್ಮನ್ನು ತಾವು ಕ್ರಿಯಾಶೀಲರಾಗಿ ಮುಖ್ಯ ರಾಜಕೀಯ ವಾಹಿನಿಯಲ್ಲಿ ತೊಡಗಿಸಿಕೊಳ್ಳುವುದರ ಮೂಲಕ ಸ್ತ್ರೀಯರ ಸ್ಥಾನಮಾನ, ಸಾಮಾಜಿಕ ಸನ್ನಿವೇಶದಲ್ಲಿ ಹಲವಾರು ಮೂಲಭೂತ ಬದಲಾವಣೆಯನ್ನು ತರಬಹುದು. ಸ್ತ್ರೀಯರು ಹೆಚ್ಚು ಸಶಕ್ತರಾಗುವುದರ ಜೊತೆಗೆ ಅವರ ಇಚ್ಛೆಯಂತೆ ಜೀವನವನ್ನು ರೂಪಿಸಿಕೊಳ್ಳಬಹುದೆಂದು ಅಜಿತ ಬಲವಾಗಿ ವಾದಿಸುತ್ತಾರೆ.

ಅಜಿತ ಅವರ ಪ್ರಕಾರ 74 ವರ್ಷ ವಯಸ್ಸಿನ ಗೌರಿಯಮ್ಮ ಹೊಸ ಆಲೋಚನೆಯ ಹರಿಕಾರ್ತಿ. ಆಶಾಕಿರಣ. ಈ ವಯಸ್ಸಿನಲ್ಲಿ ಆಕೆ ಸಹಜವಾಗಿ ರಾಜಕೀಯ ಜೀವನದಿಂದ ನಿಷ್ಕ್ರೀಯರಾಗುತ್ತಾರೆಂದು ಪಕ್ಷ ಭಾವಿಸಿತು. ಶಿಸ್ತಿನ ಸಿಪಾಯಿಯಾದ ಗೌರಿಯಮ್ಮ 'ಸ್ತ್ರೀ ಮತ್ತು ಪುರುಷರ' ಸಂಬಂಧದಲ್ಲಿ ಪುರುಷರು ನಿರ್ಣಯ ತೆಗೆದುಕೊಳ್ಳುವುದು, ಸ್ತ್ರೀಯರು ಜಾರಿಗೊಳಿಸುವಂತೆ ಗೌರಿಯಮ್ಮ ಪಕ್ಷದ ನಾಯಕರು ತೆಗೆದುಕೊಂಡ ನಿಲುವಿಗೆ ಬದ್ಧರಾಗಿ ನಡೆದುಕೊಂಡವರು. ಅವರ ಉಚ್ಚಾಟನೆ ಪಕ್ಷದಲ್ಲಿರುವ ಪುರುಷ ಪ್ರಾಧಾನ್ಯತೆ ಹಾಗೂ ನಾಯಕರು ಹಾಗೂ ಕಾರ್ಯಕರ್ತರ ನಡುವಿರುವ ಅಂತರವನ್ನು ಎತ್ತಿತೋರಿಸುತ್ತದೆ ಎನ್ನುತ್ತಾರೆ ಅಜಿತ.

ವಯಸ್ಸು ಗೌರಿಯಮ್ಮನ ಚೈತನ್ಯಕ್ಕೆ ಅಡ್ಡಿಯಾಗಿಲ್ಲ. ಕೇರಳದ ವಾತಾವರಣವೂ ಗೌರಿಯಮ್ಮ ಅವರಿಗೆ ಪೂರಕವಾಗಿದೆ. ಹಿಂದುಳಿದ ದಲಿತರ ಅಪಾರ ಬೆಂಬಲ ಹೊಂದಿದ ಗೌರಿಯಮ್ಮ ಕೇರಳದ ಹೊಸ ಭರವಸೆ. ಎಲ್ಲಾ ಪ್ರಗತಿಪರ ಚಿಂತನೆಗೆ ಮುಕ್ತವಾಗಿರುವ ಗೌರಿಯಮ್ಮ ತಮಗಿರುವ ಬೆಂಬಲ, ಅಪಾರವಾದ ಜನರ ವಿಶ್ವಾಸ, ನಂಬಿಕೆಯನ್ನು ಒಂದುಗೂಡಿಸಿದರೆ ಹೊಸ ಪರ್ಯಾಯ ವ್ಯವಸ್ಥೆಯ ಹರಿಕಾರಿಣಿಯಾಗುವುದರಲ್ಲಿ ಯಾವ ಸಂದೇಹವೂ ಇಲ್ಲವೆನ್ನುವ ಅಜಿತ ಉತ್ತಮ ಸಂಘಟನಾ ಕಾರ್ತಿಯಾದ ಗೌರಿಯಮ್ಮನಿಗೆ ಇದು ಅಸಾಧ್ಯವಾದ ಕೆಲಸವಲ್ಲ ಎಂದು ಭಾವಿಸುತ್ತಾರೆ.

ಅಭಿವೃದ್ಧಿ ಮಂಡಳಿಯ ಅಧ್ಯಕ್ಷ ಪದವಿಯನ್ನು ಗೌರಿಯಮ್ಮ ಒಪ್ಪಿಕೊಂಡರು. ಇದೂ ಸಹ ಪಕ್ಷದ ಅಸಹನೆಗೆ ಕಾರಣವಾಯಿತು.

ಆ ಕ್ಷೇತ್ರದಲ್ಲಿ ಮಾರ್ಕ್ಸಿಸ್ಟರ ಪ್ರಭಾವವನ್ನು ಕಡಿಮೆ ಮಾಡಲು ಕರುಣಾಕರನ್ ಹಾಗೂ ರಾಘವನ್ ಅವರೊಂದಿಗೆ ಗೌರಿಯವರು ನಡೆಸಿದ ಪಿತೂರಿಯೆಂದು ಆಪಾದಿಸಲಾಯಿತು. ಈ ಎಲ್ಲಾ ಆಪಾದನೆಗಳನ್ನು ಗೌರಿಯವರು ಸಾರ್ವಜನಿಕವಾಗಿ ವಿರೋಧಿಸಿದರು. 1989 ರಿಂದಲೂ ಪಕ್ಷದ ಕೆಲವರಿಂದ ಪರಿಹಾಸ್ಯಕ್ಕೆ ಒಳಗಾಗಿದ್ದೆವೆಂದು ಅವರು ಹೇಳಿದರು. ಆಕೆಗೆ ಮುಖ್ಯ

ಮಂತ್ರಿಯ ಪದವಿ ಸಿಗದ ಕಾರಣ, ಆಕೆ ಪಕ್ಷದ ನಿಲುವುಗಳನ್ನು ವಿರೋಧಿಸುತ್ತಿದ್ದರು. ಆ ಕಾರಣಕ್ಕಾಗಿ ಅವರನ್ನು ಪಕ್ಷದಿಂದ ಹೊರ ಹಾಕಲಾಯಿತೆಂದು ಪಕ್ಷದ ನಾಯಕರು ತಮ್ಮನ್ನು ತಾವು ಸಮರ್ಥಿಸಿಕೊಳ್ಳುತ್ತಾರೆ.

ಏನೇ ಕಾರಣಗಳಿದ್ದರೂ ಗೌರಿಯವರು ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿ ನಿಸ್ವಾರ್ಥದಿಂದ ದುಡಿದಿರುವುದನ್ನು ಮರೆತಿರುವುದು ದುರದೃಷ್ಟಕರ. ಎಲ್ಲಾ ಶಕ್ತಿ ಸಾಮರ್ಥ್ಯವನ್ನು ಹೊಂದಿದ್ದ ಗೌರಿಯಮ್ಮನನ್ನು ಮುಖ್ಯಮಂತ್ರಿ ಪದವಿಯಿಂದ ವಂಚಿತಗೊಳಿಸಲಾಯಿತು. ಸಮಾನತೆಯ ಮುಖ್ಯ ಸಿದ್ಧಾಂತವೆಂಬ ತಳಹದಿಯ ಮೇಲೆ ರೂಪುಗೊಂಡ ಪಕ್ಷ ಗೌರಿಯವರನ್ನು ಮುಖ್ಯಮಂತ್ರಿ ಮಾಡುವುದರಿಂದ ಯಾವ ನಷ್ಟವನ್ನು ಅನುಭವಿಸಬೇಕಾಗುತ್ತಿರಲಿಲ್ಲ. ಕಮ್ಯೂನಿಸ್ಟ್ ಪಕ್ಷವು ಮಹಿಳೆಯೊಬ್ಬಳಿಗೆ ಅಧಿಕಾರ ನೀಡುವಲ್ಲಿ ವಿಫಲಗೊಂಡಿರುವುದನ್ನು ನೋಡಿದರೆ ಪಕ್ಷದೊಳಗಿನ ಪುರುಷ ಪ್ರಧಾನತೆಯ ಅಂಶ ಸ್ಪಷ್ಟವಾಗುತ್ತದೆ. ಸ್ತ್ರೀಯರನ್ನು ಸಂಘಟನೆಗಳಲ್ಲಿ ಚಳುವಳಿಗಳಲ್ಲಿ ಮಾತ್ರ ತೊಡಗಿಸಿಕೊಳ್ಳುವುದು ಮಾತ್ರವಲ್ಲದೆ ಅಧಿಕಾರದಲ್ಲೂ ಮಹಿಳೆಯರಿಗೆ ಪಾಲು ನೀಡದಿದ್ದರೆ ಮಾರ್ಕ್ಸ್‌ವಾದಿಗಳ ಸಮಾನತೆ ಅರ್ಥಪೂರ್ಣವಾಗುವುದಿಲ್ಲ. ಯಾವ ಕಾರಣಕ್ಕಾಗಿಯೂ ವೈಯಕ್ತಿಕ ಜೀವನದಲ್ಲಿ ಹಾಗೂ ಸಾರ್ವಜನಿಕ ಜೀವನದಲ್ಲಿ ರಾಜಿ ಮಾಡಿಕೊಳ್ಳದ ಪಕ್ಷದ ನಿಷ್ಠಾವಂತ ಕಾರ್ಯಕರ್ತೆಯಾಗಿದ್ದ ಗೌರಿಯಮ್ಮನಿಗೆ ಸಿಕ್ಕ ಪ್ರತಿಫಲ ಉಚ್ಛಾಟನೆ ?

(ಸಂಗ್ರಹ)

---

**ಮಾನಸ ಓದುಗರಿಗೆ ಕಾರ್ಮಿಕ ದಿನಾಚರಣೆಯ ಶುಭಾಶಯಗಳು**

**—ಸ.ಮ.**

## ಇರಬಹುದೇ ?

ನಾನೂ ಒಂದು ದಿನ
ನಿನ್ನ ಹಾಗೇ ಇದ್ದೆ ಕಣೆ
ಇದೇ ಮಿಂಚುಗಣ್ಣು
ಚಿಗರೆ ನಡೆ ನಕ್ಷತ್ರನಗು
ಕೆನ್ನೆ ಕೆಂಪು ಸುಳಿಗಲ್ಲ
ಹೀಗೆಯೆ, ನಿನ್ನ ಹಾಗೆಯೆ
ಹರೆಯದ ಮಗಳಲ್ಲಿ ಹೇಳಿದರೆ
ನಂಬುವುದಿಲ್ಲವಲ್ಲ ಇವಳು !
ಎಲ್ಲ ಬರಿ ಸುಳ್ಳು
ನೀನು ಹೀಗೆಯೆ ಹುಟ್ಟಿರಬೇಕು
ಕಿವಿ ಬಳಿ ನೆರೆತ ಕೂದಲು
ಹೊಗೆ ತುಂಬಿದ ಕಣ್ಣು ಗುಳಿಗಲ್ಲ
ಬಿಳಿಚುಮುಖ ಶೂನ್ಯನೋಟ, ಮತ್ತೆ
ಕೈಯಲ್ಲೊಂದು ಸೌಟು
ಈ ಸೀರೆ, ಈ ರವಿಕೆ
ಹೀಗೇ, ನೀನು ಹೀಗೆಯ
ಹುಟ್ಟಿರಬೇಕು ಅನ್ನುತ್ತಾಳೆ
ಸಂಶಯವಾಗುತ್ತದೆ ನನಗೆ–
ಹೌದೆ, ಇರಬಹುದೆ,
ನೆನಪುಗಳೆಂದೋ ಕರಗಿ
ಕೆನ್ನೆಯಿಂದ ಇಳಿದು ಅಳಿದಿವೆ.
ಇವಳೆಂದದ್ದು ಸರಿಯೆ ?
ನಾನು ಹೀಗೆಯೆ ಹುಟ್ಟಿರಬಹುದೆ ?
ಇಷ್ಟೇ ಹಳತಾಗಿ !

● **ಚಿತ್‌ಪ್ರಭಾ**

## ಬಾಲಕಿಯರ ಚೈತನ್ಯಕ್ಕೆ ನೀರೆರೆಯುವ

# ಗಿರಿಜ - ಕಿರುಚಿತ್ರ

"ನಾನು ರಾಕ್ಷಸನ ಬಳಿ ಹೋಗಿ ಮಳೆ ಬೀಜ ತರ್ತೀನಿ, ನನಗೆ ವೀಳ್ಯ ಕೊಡಿರಿ" ಎಳೆಯ ಬಾಲೆಯೊಬ್ಬಳು ಎದೆಯಲ್ಲಿ ತುಂಬಿಕೊಂಡ ಆತ್ಮವಿಶ್ವಾಸದಿಂದ ರಾಜನ ಬಳಿ ಕೇಳುತ್ತಾಳೆ. ಆಕೆಯ ಮಾತನ್ನು ಕೇಳಿದ ರಾಜ ಗೇಲಿ ಮಾಡಿ ನಗುತ್ತಾನೆ. ಡಾ॥ ಚಂದ್ರಶೇಖರ ಕಂಬಾರರ ಕತೆಯನ್ನಾಧರಿಸಿದ ಬಿ. ಜಯಶ್ರೀ ಹಾಗೂ ದೀಪಾ ಧನರಾಜ್ ನಿರ್ದೇಶಿಸಿದ 'ಗಿರಿಜಾ' ಕಿರುಚಿತ್ರ, ಶತಮಾನದ ನಂಬಿಕೆಗಳ ಹೊಸಿಲ ತುಳಿದು ಹೊರಬಂದು 'ಮುಗ್ಧತೆಯ' ನೆಲೆಯಲ್ಲಿಯೇ ಹೊಸ ಸವಾಲನ್ನು ಸ್ವೀಕರಿಸುವ ಬಾಲಕಿಯ ಸುತ್ತ ಹೆಣೆಯಲಾಗಿದೆ.

ಮೂರು ಜನ ಮಹಿಳೆಯರು ಕೋರಸ್ ಹಾಡಿನ ಮೂಲಕ ಹೇಳುವ ಕತೆಯೊಂದಿಗೆ ಸಾಗುವ ಚಿತ್ರ, ಕತೆಯೊಳಗೊಂದು ಕತೆಯನ್ನು ಸೃಷ್ಟಿಸುತ್ತದೆ. ಗಿರಿಜಾಳ ಕುಟುಂಬ ಒಂದು ಪುಟ್ಟ ಹಕ್ಕಿಯ ಗೂಡು. ಮಳೆಯಿಲ್ಲದೆ, ನೀರಿಲ್ಲದ, ಬಸವಳಿಯುತ್ತಿದ್ದ ಗ್ರಾಮದಲ್ಲಿ ಗಿರಿಜಾ ಬರಿಗಾಲಲ್ಲಿ ನಡೆದು ದೂರದ ಸಣ್ಣ ಕೊಳದಲ್ಲಿ ಹೊರಲಾರದ ಬಿಂದಿಗೆಯನ್ನು ಹೊತ್ತು ತರುತ್ತಿದ್ದರೆ, ಮನೆಯಲ್ಲಿ ಅವಳ ಅಣ್ಣ ಆಟವಾಡುತ್ತಿರುತ್ತಾನೆ. ತಾಯಿ ಮಕ್ಕಳಿಬ್ಬರಿಗೂ ಊಟಬಡಿಸುವಾಗ ಗಂಡು ಮಗನಿಗೆ ಒಂದು ಮುದ್ದೆ ನೀಡುವುದು, ಮಗಳಿಗೆ ನೀಡಿದ ಒಂದು ಮುದ್ದೆಯಲ್ಲಿ ಅರ್ಧ ತೆಗೆದು ಪುನಃ ಮಗನಿಗೆ ಬಡಿಸುವುದು. ಮಗನಿಗೆ ಹೆಚ್ಚು ಸಾರನ್ನು ಬಡಿಸುವುದು, ಗಿರಿಜಾ ಪುಸ್ತಕವನ್ನು ತಿರುವು-ಮುರುವು ಹಿಡಿದುಕೊಂಡು ಓದುವುದನ್ನು ಕಂಡ ಆಕೆಯ ಅಣ್ಣ ಶಿವಣ್ಣ ಗೇಲಿ ಮಾಡುವುದು, ಇಂತಹ ಘಟನೆಗಳು ನಮ್ಮ ಕುಟುಂಬಗಳಲ್ಲಿ ಹೆಣ್ಣು ಮಗುವನ್ನು ಬೆಳೆಸುವ ರೀತಿಗೂ ಗಂಡು ಮಗುವನ್ನು ಬೆಳೆಸುವ ರೀತಿಗೂ ಇರುವ ವ್ಯತ್ಯಾಸ. ತಾರತಮ್ಯವನ್ನು ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ಗಿರಿಜಾ ಶತಮಾನಗಳಿಂದ ತನ್ನ ಮೇಲೆ ಹೇರಲಾದ ಉಸಿರುಗಟ್ಟಿಸುವ ಮೌಲ್ಯಗಳ ಕೋಟೆಯ ಒಳಗಡೆಯೇ ತನ್ನದೇ ಆಸೆಯ ಗೂಡನ್ನು ಕಟ್ಟುತ್ತಿರುವ ಸೂಕ್ಷ್ಮಮತಿಯ ಹುಡುಗಿ. ರಾಕ್ಷಸನ ಬಳಿ ಹೋಗಿ ಮಳೆ ಬೀಜವನ್ನು ತರಬೇಕೆಂಬ ತನ್ನಲ್ಲಿರುವ ಆಸೆಯನ್ನು ಆಗ ಆ ಮೂರು ಜನ ಮಹಿಳೆಯರಲ್ಲಿ ಹೇಳಿಕೊಳ್ಳುತ್ತಾಳೆ. ರಾಕ್ಷಸನ ಬಳಿ ಹೋಗಿ ಮಳೆ ಬೀಜವನ್ನು ತರುವ ಗುಟ್ಟನ್ನು ಹೇಳುತ್ತಾ, ಮಳೆಬೀಜವನ್ನು ತರಲು ಹೋಗಬೇಕಾದರೆ ಆಕೆ ಗಂಡು ಹುಡುಗನಾಗಬೇಕೆಂಬ ಷರತ್ತನ್ನು ಹಾಕುತ್ತಾರೆ. ಅದನ್ನು ಒಪ್ಪಿದ ಗಿರಿಜಾ, ಹೆಣ್ಣುಮಕ್ಕಳಲ್ಲಿ ಕಂಡುಬರುವ ನಾಚಿಕೆ ಸಂಕೋಚ ಪ್ರವೃತ್ತಿಗಳನ್ನು ಬಿಟ್ಟು, ಗಂಡುಮಕ್ಕಳು ಆಡುವ ಆಟಗಳನ್ನು ಆಡುವುದು, ಧೈರ್ಯ, ಸಾಹಸದ ಮನೋಭಾವನೆಗಳನ್ನು ಬೆಳೆಸಿಕೊಳ್ಳೆಂದು ಹಾರೈಸುತ್ತಾ ಅವಳನ್ನು ಕಳಿಸಿಕೊಡುತ್ತಾರೆ. ರಾಜನ ಒಪ್ಪಿಗೆಯನ್ನು ಪಡೆದು ರಾಕ್ಷಸನ ಬಳಿ ಹೋಗಿ ರಾಕ್ಷಸ ಕೇಳುವ ಎರಡು ಒಗಟುಗಳಿಗೆ ಸರಿ ಉತ್ತರ ಹೇಳುವ ಸಂದರ್ಭದಲ್ಲಿ ತಲೆಯ ಮೇಲೆ ಕಟ್ಟಿಕೊಂಡ ಬಟ್ಟೆ ಬಿದ್ದು ಹೋಗಿ, ಆಕೆ ಹುಡುಗಿಯೆಂಬ ಸತ್ಯ ರಾಕ್ಷಸನಿಗೆ ಅರಿವಾಗುತ್ತಲೇ ಅವನು ಬೆಂಕಿ ಆವರಿಸಿ ನಾಶವಾಗುತ್ತಾನೆ. ಇದೇ ಕಾರ್ಯಕ್ಕೆ ಬಂದ ಗಿರಿಜಾಳ ಅಣ್ಣ ಬೀಜವನ್ನು ತೆಗೆದುಕೊಂಡು, ಇಬ್ಬರೂ ಗ್ರಾಮಕ್ಕೆ ವಾಪಸ್ಸು ಬರುತ್ತಾರೆ. ಬಾಯಾರಿದ ರಾಜ್ಯ ಸಂತೋಷ ಸಂಭ್ರಮದಿಂದ ತುಳುಕಾಡುತ್ತದೆ. ರಾಜ ಮಳೆ ಬೀಜ ತಂದಿರುವುದು ಗಿರಿಜಾಳ ಅಣ್ಣ ಎಂದು, ಮಳೆ ಬೀಜವನ್ನು ಆತನಿಂದ ಬಿತ್ತನೆ ಮಾಡಿಸುತ್ತಾನೆ. ಆದರೆ ಮಳೆ ಬರುವುದಿಲ್ಲ. ಎಲ್ಲೋ ಏನೋ ತಪ್ಪಾಗಿದೆಯೆಂದು, ಗಿರಿಜಾಳ ಅಣ್ಣನನ್ನು ಬೆದರಿಸಿದಾಗ ಮಳೆ ಬೀಜವನ್ನು ತಂದವಳು ತಾನೆಂದು ಮುಂದೆ ಹೋಗಿ ಬಿತ್ತನೆ ಮಾಡುತ್ತಾಳೆ. ಮಳೆ ಸುರಿದು ಮಣ್ಣು, ಮನಸ್ಸುಗಳೆರಡೂ ತಂಪಾಗುತ್ತವೆ.

ರಾಜ, ಹೊನ್ನು ರಾಜ್ಯವೆರಡನ್ನು ಧೀರ ಬಾಲಕಿ 'ಗಿರಿಜಾ'ಳಿಗೆ ನೀಡುತ್ತಾನೆ. ಗಿರಿಜಾಳಲ್ಲಿರುವ ಕ್ರಿಯಾಶೀಲತೆ, ಧೈರ್ಯ, ಸಾಹಸ ಎಲ್ಲೆಲ್ಲಿಯೂ ಅಡಗಿರುತ್ತದೆಯೆಂದು ಕೋರಸ್‌ನ ಮಹಿಳೆಯರು ಹಾಡುತ್ತಾ, ಕುಣಿಯುತ್ತಾ ಹೋಗುತ್ತಾರೆ.

ಗಿರಿಜಾಳ ಕತೆ ಹೇಳಲು ಬಳಸಿಕೊಂಡಿರುವ ತಂತ್ರಗಳು ಆಕರ್ಷಕವಾಗಿವೆ. ಕೋರಸ್‌ನ 'ಮಹಿಳೆಯರು ಗೊಂಬೆಗಳ ಮೂಲಕ ಕತೆ ಹೇಳುವುದು, ಪ್ರೇಕ್ಷಕರಿಂದಲೇ ಗಿರಿಜಾ ಮೂಡಿ ಬರುವುದು, ಗಿರಿಜಾ ತನ್ನ ತಾಯಿಗೆ ಕತೆ ಹೇಳುತ್ತಾ ತಾನೇ ನಾಯಕಿಯಾಗುವುದು ಕೋರಸ್ ತಂತ್ರ ಇವು ಗಮನ ಸೆಳೆಯುವ ಅಂಶಗಳಾಗಿವೆ. ❖

○ **ಎಚ್. ಎಸ್. ರಾಜೇಶ್ವರಿ**

# ಪಿತೃ ಪ್ರಧಾನತೆ ಎಂದರೇನು ?

● ಕಮಲಾ ಬಾಸಿನ್

(ಮುಂದುವರಿದ ಭಾಗ)

**ಪ್ರ: ಬಹಳಷ್ಟು ಸಮಾಜಗಳಲ್ಲಿ ಹೆಂಗಸರ ಮೇಲೆ ಸಾಂಸ್ಥಿಕ ಸ್ವರೂಪದ ಹಿಂಸೆ ಇದೆಯೆಂಬುದನ್ನು ಕೆಲವು ಸ್ತ್ರೀವಾದಿಗಳು ನಂಬುತ್ತಾರಲ್ಲವೇ ?**

**ಉ :** ಹೌದು. ಅವರು ನಂಬುತ್ತಾರೆ. ಅವರ ಪ್ರಕಾರ ಸ್ತ್ರೀಯರನ್ನು ಹತೋಟಿಯಲ್ಲಿ ಇಟ್ಟುಕೊಳ್ಳಲು ಹಾಗೂ ಸ್ವಾಧೀನಗೊಳಿಸಿಕೊಳ್ಳಲು ವಿಭಿನ್ನ ರೀತಿಯ ಹಿಂಸೆಯ ಪ್ರಕಾರಗಳನ್ನು ಬಳಸಿಕೊಳ್ಳಲಾಗುತ್ತಿದೆ. ಈ ರೀತಿಯ ಪುರುಷರ ಹಿಂಸೆ ನ್ಯಾಯಯುತವಾದದ್ದೆಂದೂ ಕೂಡಾ ಎಣಿಸಲಾಗಿದೆ. ನಿಜವೆಂದರೆ ಸ್ತ್ರೀಯರ ಮೇಲಿನ ಹಿಂಸೆ ವ್ಯತಿರಿಕ್ತವಾದುದು. ಸಿಲ್ವಿಯಾ ವಾಲ್ ಬೈ ಪುರುಷರ ಹಿಂಸೆಯನ್ನು ಒಂದು ರಚನೆ ಎಂದು ಕರೆಯುತ್ತಾಳೆ. ಅವಳು ಬರೆಯುತ್ತಾಳೆ,

"ಸ್ಪಷ್ಟವಾಗಿರುವ ವೈಯಕ್ತಿಕವಾದ ಹಾಗೂ ವೈವಿಧ್ಯಮಯವಾದ ರೂಪಕ್ಕೆ ಹೊರತಾಗಿಯೂ ಸಹ ಪುರುಷರ ಹಿಂಸೆಯು ಒಂದು ರಚನೆಯನ್ನು ಹುಟ್ಟು ಹಾಕಿದೆ. ಇದು ದೈನಂದಿನ ಬದುಕಿನಲ್ಲಿ ಒಂದು ನಡವಳಿಕೆಯಾಗಿ ಹೆಂಗಸರು ಗಂಡಸರಿಂದ ಅನುಭವಿಸುತ್ತಿರುತ್ತಾರೆ. ಕೆಲವೊಂದು ವಿಶೇಷ ಘಟನೆಗಳ ಹೊರತಾಗಿ ಈ ಹಿಂಸೆಯಲ್ಲಿ ತಲೆ ಹಾಕಲು ತಿರಸ್ಕರಿಸುವುದರ ಮೂಲಕ ಪ್ರಭುತ್ವವು (state) ಪುರುಷರ ಹಿಂಸೆಯನ್ನು ವ್ಯವಸ್ಥಿತವಾಗಿ ಪ್ರೋತ್ಸಾಹಿಸಿದೆ ಹಾಗೂ ಕಾನೂನು ಬದ್ಧಗೊಳಿಸಿದೆ."

ಅಂತರ್‌ರಾಷ್ಟ್ರೀಯ ಮಹಿಳಾ ಚಳುವಳಿಯಲ್ಲಿ ಚರ್ಚೆಗೆ ಹಾಗೂ ವಿಶ್ಲೇಷಣೆಗೆ ತೆಗೆದುಕೊಂಡ ಪ್ರಧಾನ ಸಮಸ್ಯೆಗಳಲ್ಲಿ ಮಹಿಳೆಯರ ಮೇಲಿನ ಹಿಂಸೆಯೂ ಕೂಡ ಒಂದಾಗಿದೆ. ಸ್ತ್ರೀವಾದಿ ಪಾಂಡಿತ್ಯ ಈ ಹಿಂಸೆಯನ್ನು ಅನೇಕ ರೀತಿಯಲ್ಲಿ ತಾತ್ವಿಕಗೊಳಿಸಿದೆ. ಹಿಂಸೆ ವ್ಯವಸ್ಥಿತವಾದದ್ದು ಹಾಗೂ ಸಾಂಸ್ಥೀಕರಣಗೊಳಿಸಲ್ಪಟ್ಟದ್ದು ಎಂಬ ಅಂಶವನ್ನು ಈ ಎಲ್ಲಾ ತಾತ್ವಿಕತೆಗಳೂ ಒಪ್ಪಿಕೊಂಡಿವೆ.

ಮೇರಿ ಡೇಲಿ ಪ್ರಕಾರ ಪಿತೃಪ್ರಾಧಾನ್ಯತೆಯು ಆಳುವವರು (ಅಧಿಕಾರ ಹೊಂದಿದ ಪುರುಷರು) ಬದುಕಿನ ವಿರುದ್ಧವೇ ಬೆಳೆಯುತ್ತಿರುವ ಹೋರಾಟವನ್ನು ಹುಟ್ಟು ಹಾಕಿರುತ್ತಾರೆ. "ಪಿತೃ ಪ್ರಾಧಾನ್ಯತೆಯ ಪ್ರಭುತ್ವ ಯುದ್ಧದ ಪ್ರಭುತ್ವವಾಗಿರುತ್ತದೆ. ಇಲ್ಲಿ ನಷ್ಟ ಕೂಡಿಸಿಕೊಳ್ಳುವ ಸಂದರ್ಭಗಳಿಂದ ಹಿಡಿದು ಯುದ್ಧದ ಸಿದ್ಧತೆಗಳನ್ನು ನಯವಾಗಿ "ಶಾಂತಿ" ಎಂದು ಕರೆಯಲಾಗುತ್ತದೆ." ಡೇಲಿಯ ಪ್ರಕಾರ ಭಾರತದಲ್ಲಿರುವ ವಿಧವೆಯರ ದಹನ, ಚೈನಾದಲ್ಲಿ ಪಾದಗಳ ಕಟ್ಟುವ ಸಂಪ್ರದಾಯ, ಆಫ್ರಿಕಾದಲ್ಲಿ ಯುವತಿಯರ ಗುಪ್ತಾಂಗಗಳ ಊನಗೊಳಿಸುವಿಕೆ; ಯೂರೋಪಿನ 'ರಿನೇಜಾನ್ಸ್' ನಲ್ಲಿ ಸ್ತ್ರೀಯರನ್ನು ಮಾಂತ್ರಿಕವಾದಿನಿಯರೆಂದು ಕೊಲೆಗೈದದ್ದು, ಅಮೇರಿಕಾದ ಗೈನಾಕಾಲಜಿ ಹಾಗೂ ಸೈಕೋತೆರಪಿಯ ಹೆಸರಿನಲ್ಲಿ ನಡೆಯುವ ಜಿನೋಸೈಡ್ ಇವೆಲ್ಲವೂ ಪ್ರಪಂಚದ ವಿಭಿನ್ನ ಸಂಸ್ಕೃತಿಗಳಲ್ಲಿ ಜಾರಿಯಲ್ಲಿರುವ ಸ್ತ್ರೀಯರ ಬಗೆಗಿನ ದ್ವೇಷ ಹಾಗೂ ಅವರ ಮೇಲಿನ ಹಿಂಸೆಗೆ ಉದಾಹರಣೆಗಳಾಗಿವೆ.

ದಕ್ಷಿಣ ಏಶಿಯಾದಲ್ಲಿ ಸ್ತ್ರೀಯರ ವಿರುದ್ಧದ ಹಿಂಸಾಚಾರವನ್ನು ಅಧಿಕ ಪ್ರಮಾಣದಲ್ಲಿ ದಾಖಲೆ ಮಾಡಲಾಗಿದೆ. ಹಿಂಸಾಚಾರ ಹಾಗೂ ಸ್ತ್ರೀಯರ ಆರ್ಥಿಕ ಶೋಷಣೆ, ಹಿಂಸಾಚಾರ ಮತ್ತು ಲೈಂಗಿಕತೆ, ಹಿಂಸಾಚಾರ ಮತ್ತು ಜಾತಿ, ವರ್ಗ ಮತ್ತಿತರ ನಡುವಿನ ಸಂಬಂಧವನ್ನು ನೋಡುವ ಪ್ರಯತ್ನಗಳನ್ನು ಮಾಡಲಾಗಿದೆ. 1988ರಲ್ಲಿ ಭಾರತದಲ್ಲಿ ನಡೆದ ಸ್ವಾಯತ್ತ ಮಹಿಳಾ ಸಂಸ್ಥೆಗಳ ಒಂದು ಸಮಾವೇಶದಲ್ಲಿ (ನಾರಿ ಮುಕ್ತಿ ಸಂಘರ್ಷ ಸಮ್ಮೇಳನ) ಈ ಕೆಳಕಂಡ ನಿರ್ಣಯಗಳನ್ನು ತೆಗೆದುಕೊಳ್ಳಲಾಗಿದೆ.

ಸ್ತ್ರೀಯರು ವಿಶಿಷ್ಟ ಬಗೆಯ ಹಿಂಸೆಯನ್ನು ಎದುರಿಸುತ್ತಾರೆ. ಅತ್ಯಾಚಾರ ಹಾಗೂ ಇತರ ಬಗೆಯ ಲೈಂಗಿಕ ಬಯ್ಗುಳು ; ಶಿಶುಭ್ರೂಣ ಹತ್ಯೆ, ಮಂತ್ರವಾದಿ-ಕೊಲೆ, ಸತಿ, ವರದಕ್ಷಿಣೆ ಸಾವು, ಹೆಂಡತಿಯನ್ನು ಹೊಡೆಯುವುದು ಈ ರೀತಿಯ ಹಿಂಸಾಚಾರದಿಂದ ಹಾಗೂ ಸ್ತ್ರೀಯರಲ್ಲಿ ತುಂಬಿಸಿರುವ ನಿರಂತರವಾಗಿರುವ ಅಭದ್ರತೆಯಲ್ಲಿ ಅವರು ಮನೆಯಲ್ಲಿಯೇ ಬಂಧಿಸಲ್ಪಟ್ಟಿದ್ದಾರೆ, ಆರ್ಥಿಕವಾಗಿ ಶೋಷಿತರಾಗಿದ್ದಾರೆ, ಮತ್ತು ಸಾಮಾಜಿಕವಾಗಿ

ತುಳಿಯಲ್ಪಟ್ಟಿದ್ದಾರೆ. ಕುಟುಂಬದಲ್ಲಿ, ಸಮಾಜದಲ್ಲಿ ರಾಷ್ಟ್ರದಲ್ಲಿ ನಿರಂತರವಾಗಿ ನಡೆಯುತ್ತಿರುವ ಹಿಂಸಾಚಾರದ ಹೋರಾಟಗಳಲ್ಲಿ ಪ್ರಭುತ್ವವೇ ಹಿಂಸೆಯ ಮುಖ್ಯ ಮೂಲಗಳಲ್ಲಿ ಒಂದಾಗಿದೆ. ಪುರುಷರು ಕುಟುಂಬಗಳಲ್ಲಿ ಸ್ತ್ರೀಯರ ಮೇಲೆ ನಡೆಸುವ ಹಿಂಸಾಚಾರದಲ್ಲಿ, ಕೆಲಸ ಮಾಡುವಲ್ಲಿ ಮತ್ತು ನೆರೆಹೊರೆಯಲ್ಲಿ ನಡೆಯುವ ಹಿಂಸಾಚಾರದ ಹಿಂದೆ ಪ್ರಭುತ್ವವು ಪ್ರಬಲವಾಗಿ ವರ್ತಿಸುತ್ತದೆ ಎಂಬುದನ್ನು ನಾವು ಗುರುತಿಸಿದ್ದೇವೆ. ಈ ಕಾರಣಗಳಿಗಾಗಿ ಜನಪರ ಮಹಿಳಾ ಚಳುವಳಿ ಈ ಹಿಂಸಾಚಾರದ ವಿರುದ್ಧ ಮನೆಯಲ್ಲಿ ಅಥವಾ ಹೊರಗಡೆ ನಡೆಯುವ ಹೋರಾಟಗಳಿಗೆ ಹೆಚ್ಚು ಗಮನ ನೀಡಬೇಕಾಗುತ್ತದೆ.

**ಪ್ರ : ಈ ಎಲ್ಲಾ ಸಂಸ್ಥೆಗಳ ಮೇಲೆ ಪುರುಷರ ನಿಯಂತ್ರಣ ಅವರಿಗೆ ಪ್ರತ್ಯಕ್ಷವಾಗಿ ಲಾಭದಾಯಕವಾಗಿದೆ ಎಂದು ನಾವು ಹೇಳಬಹುದೇ ?**

**ಉ :** ಸಾಮಾನ್ಯವಾಗಿ ಮಾತನಾಡುವುದಾದರೆ ಹಾಗೆ ಹೇಳಬಹುದು. ಪುರುಷರು ಕೇವಲ ಹೆಚ್ಚು ಸವಲತ್ತು ಮತ್ತು ನಿಯಂತ್ರಣಗಳ ಹಂತದಲ್ಲಿ ಅಷ್ಟೇ ಅಲ್ಲ, ಆರ್ಥಿಕವಾಗಿ ಹಾಗೂ ಲೌಕಿಕವಾಗಿಯೂ ಸಹ ಲಾಭ ಪಡೆಯುತ್ತಾರೆ. ಪಿತೃಪ್ರಾಧಾನ್ಯತೆಗೆ **ಲೌಕಿಕ ತಳಹದಿ** (Meterial basis) ಇದೆ. ಸ್ತ್ರೀಯರು ಉತ್ಪಾದನೆಯ ವರ್ಗ, ಮತ್ತು ಪುರುಷರು ಅಪಹರಿಸುವ ವರ್ಗ ಎಂದು ಹೇಳುವಾಗ ಸಿಲ್ವಿಯಾ ವಾಲ್ ಬೈ ಇದನ್ನೇ ಹೇಳುತ್ತಾರೆ. ಪಿತೃ ಪ್ರಾಧಾನ್ಯತೆ ಹಾಗೂ ಬಂಡವಾಳ ಶಾಹಿತ್ವದ ನಿಕಟ ಸಂಬಂಧ ಗಮನಿಸುವ ಹೈಡಿ ಹಾರ್ಟ್‌ಮನ್–ಸ್ತ್ರೀವಾದಿ ಚಿಂತಕಿ ಹೀಗೆ ಹೇಳುತ್ತಾಳೆ :

> ಪಿತೃ ಪ್ರಾಧಾನ್ಯತೆ ಮೂಲಭೂತವಾಗಿ ಸ್ತ್ರೀಯರ ಶ್ರಮಶಕ್ತಿಯ ಮೇಲೆ ಪುರುಷರ ನಿಯಂತ್ರಣದ ಲೌಕಿಕ ತಳಹದಿಯ ಮೇಲೆ ಅವಲಂಬಿತವಾಗಿದೆ. ಕೆಲವು ಅಗತ್ಯ ಉತ್ಪಾದನಾ ಸಂಪನ್ಮೂಲಗಳ ಪಡೆಯುವಿಕೆಯ ಅಧಿಕಾರದಿಂದ ಸ್ತ್ರೀಯರನ್ನು ಹೊರಗಿಡುವುದರಿಂದ (ಬಂಡವಾಳ ಶಾಹಿ ಸಮಾಜದಲ್ಲಿ, ಉದಾಹರಣೆಗೆ ಹಣ ಸಿಕ್ಕುವ ಕೆಲಸಗಳಿಂದ) ಮತ್ತು ಸ್ತ್ರೀಯರ ಲೈಂಗಿಕತೆಯನ್ನು ನಿರ್ಬಂಧಿಸುವುದರ ಮೂಲಕ ಪುರುಷರು ಈ ನಿಯಂತ್ರಣವನ್ನು ಉಳಿಸಿಕೊಂಡು ಬರುತ್ತಾರೆ. ಏಕ ಪತಿತ್ವ/ಪತ್ನಿತ್ವ ವಿಭಿನ್ನ ಲಿಂಗೀಯ ವಿವಾಹ ಇತ್ತೀಚಿನದು ಹಾಗೂ ಸಮರ್ಥ ಆಕಾರ ಹೊಂದಿದ್ದು-ಪುರುಷರು ಎರಡೂ ವಿಭಾಗಗಳಲ್ಲಿ ನಿಯಂತ್ರಣ ಸಾಧಿಸುವುದಕ್ಕೆ ಅನುವು ನೀಡುತ್ತದೆ. ಸಂಪನ್ಮೂಲಗಳು ದಕ್ಕಲಾರದ ಹಾಗೂ ಸ್ತ್ರೀಯರ ಮೇಲಿನ ನಿಯಂತ್ರಣವು ಪ್ರತಿಫಲವಾಗಿ ಪುರುಷರಿಗೆ ಸ್ತ್ರೀಯರ ಶ್ರಮಶಕ್ತಿಯನು ನಿಯಂತ್ರಿಸುವುದಕ್ಕೆ ಅನುವುನೀಡುತ್ತವೆ. ಇವೆರಡೂ ವೈಯಕ್ತಿಕ ಹಾಗೂ ಲೈಂಗಿಕ ಸಂಬಂಧಗಳಲ್ಲಿ ಪುರುಷರಿಗೆ ಸೇವೆ ಮಾಡುವ ಉದ್ದೇಶದಿಂದಾಗಿ ಹಾಗೂ ಮಕ್ಕಳನ್ನು ಬೆಳೆಸುವ ಉದ್ದೇಶದಿಂದಾಗಿ ಇರುವುವು. ಪುರುಷರಿಗೆ ಸ್ತ್ರೀಯರು ನೀಡುವ ಸೇವೆಗಳು ಹಲವಾರು ಅಸಂತೋಷಕರ ಕೆಲಸಗಳನ್ನೂ ಮಾಡುವುದರಿಂದ ಪುರುಷರನ್ನು ಬಿಡುಗಡೆಗೊಳಿಸುತ್ತವೆ. ಇವು ಕುಟುಂಬದ ಒಳಗಡೆ ಹಾಗೂ ಹೊರಗಡೆ ಎರಡೂ ಕಡೆ ನಡೆಯುತ್ತವೆ.......ಪಿತೃ ಪ್ರಾಧಾನ್ಯತೆಯ ಲೌಕಿಕ ತಳಪಾಯ ಆಗ ಕುಟುಂಬದಲ್ಲಿ ಮಕ್ಕಳನ್ನು ಲಾಲಿಸುವುದರ ಮೇಲಷ್ಟೇ ಅವಲಂಬಿಸಿಲ್ಲ. **ಅದು ಎಲ್ಲಾ ಸಾಮಾಜಿಕ ರಚನೆಗಳನ್ನು ಅವಲಂಬಿಸಿದ್ದು, ಪುರುಷರು ಸ್ತ್ರೀಯರ ಶ್ರಮಶಕ್ತಿಯನ್ನು ನಿಯಂತ್ರಿಸುವುದನ್ನು ಸಾಧ್ಯವಾಗಿಸುತ್ತದೆ.**

**ಪ್ರ : ಪಿತೃ ಪ್ರಧಾನತೆಯ ವ್ಯವಸ್ಥೆಯಲ್ಲಿ ಸ್ತ್ರೀಯರು ಸಂಪೂರ್ಣವಾಗಿ ಅಧಿಕಾರ ರಹಿತರಾಗಿದ್ದಾರೆಯೇ ?**

**ಉ :** ಸಾಮಾನ್ಯವಾಗಿ ಪಿತೃ ಪ್ರಧಾನತೆಯು ಮುಖ್ಯವಾಗಿರುವ ಸಂಸ್ಥೆಗಳಲ್ಲೆಲ್ಲಾ ಪುರುಷರು ಅಧಿಕಾರವನ್ನು ಹೊಂದಿರುತ್ತಾರೆ. ಹಾಗೆಂದ ಮಾತ್ರಕ್ಕೆ ಪಿತೃ ಪ್ರಧಾನತೆಯಲ್ಲಿ ಸ್ತ್ರೀಯರು ಸಂಪೂರ್ಣ ಅಧಿಕಾರ ರಹಿತರು ಅಥವಾ ಸಂಪೂರ್ಣವಾಗಿ ಹಕ್ಕುಗಳು, ಪ್ರಭಾವ ಮತ್ತು ಸಂಪನ್ಮೂಲಗಳನ್ನು ಹೊಂದಿಲ್ಲದವರು ಎಂದರ್ಥವಲ್ಲ. ನಿಜವೆಂದರೆ, ಯಾವುದೇ ಅಸಮಾನ ವ್ಯವಸ್ಥೆ ಶೋಷಿತರ ಭಾಗವಹಿಸುವಿಕೆ ಇಲ್ಲದೇ ಮುಂದುವರಿಯಲಾರದು. ಇಲ್ಲಿ ಲಾಭಗಳನ್ನು ಪಡೆದುಕೊಳ್ಳುತ್ತಾರೆ. ಇದು ಪಿತೃ ಪ್ರಧಾನತೆಯಲ್ಲಿಯೂ ಸತ್ಯವಾಗಿದೆ. ಸ್ತ್ರೀಯರು ರಾಣಿಯರಾಗಿ ಅಥವಾ ಪ್ರಧಾನ ಮಂತ್ರಿಗಳಾಗಿ ಅಧಿಕಾರದ ಗದ್ದುಗೆಯನ್ನೇರಿದ್ದಾರೆ. ಪ್ರಾಸಂಗಿಕವಾಗಿ ನಿಯಂತ್ರಣಕ್ಕೊಳಗಾಗುವುದಿಲ್ಲ. ದೊಡ್ಡ ಅಥವಾ ಚಿಕ್ಕ ಪ್ರಮಾಣದಲ್ಲಿ

ಲಾಭಗಳನ್ನು ಪಡೆದಿದ್ದಾರೆ. ಆದರೆ ಇದು – ಈ ವ್ಯವಸ್ಥೆ ಪುರುಷ ನಿಯಂತ್ರಣದ ಪ್ರಾಧಾನ್ಯತೆ ಹೊಂದಿದೆ ಎಂಬುದನ್ನಾಗಲೀ, ಸ್ತ್ರೀಯರು ಇಲ್ಲಿ ಕೇವಲ ವಿವಿಧ ಬಗೆಗಳಲ್ಲಿ ಹೊಂದಿಸಲ್ಪಟ್ಟಿದ್ದಾರೆ ಎಂಬ ಅಂಶವನ್ನಾಗಲೀ ಬದಲಾಯಿಸುವುದಿಲ್ಲ. ಇದಕ್ಕೆ ಸಾದೃಶ್ಯವೆಂದರೆ, ಬಂಡವಾಳ ಶಾಹಿತ್ವದ ಸಮಾಜದಲ್ಲಿ ಕಾರ್ಮಿಕರು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತಾರೆ, ಆದರೆ ಅವರಿಗೆ ನಿಯಂತ್ರಣವಿದೆ ಎಂಬುದು ಇದರರ್ಥವಲ್ಲ.

ಜರ್ಡಾ ಲರ್ನರ್ ಪರಿಣಾಮಕಾರಿಯಾದ ಅಂಶ ಹೇಳುತ್ತಾರೆ.

> ಪುರುಷರು ಮತ್ತು ಸ್ತ್ರೀಯರು ರಂಗಮಂದಿರದಲ್ಲಿ ಬದುಕುತ್ತಾರೆ, ಇದರಲ್ಲಿ ಅವರಿಗೆ ಕೊಟ್ಟ ಪಾತ್ರಗಳನ್ನು ಅವರು ನಿರ್ವಹಿಸುತ್ತಾರೆ. ಪ್ರಾಮುಖ್ಯತೆಯಲ್ಲಿ ಸಮಾನವಾಗಿ ಈ ಎರೆಡೂ ಪ್ರದರ್ಶನಕಾರರಿಲ್ಲದೇ ಈ ನಾಟಕ ನಡೆಯುವುದಿಲ್ಲ. ಯಾರೊಬ್ಬರೂ ಪರಿಪೂರ್ಣತೆಗೆ ಹೆಚ್ಚು ಅಥವಾ ಕಡಿಮೆ 'ಕೊಡುಗೆ' ನೀಡುವುದಿಲ್ಲ. ಯಾರೊಬ್ಬರೂ ವಿನಾಯತಿ ಕೊಡಬಹುದಾದವರಲ್ಲ. ಆದರೆ ರಂಗಮಂದಿರ ರೂಪಿಸಲ್ಪಟ್ಟಿರುವುದು, ವರ್ಣರಂಜಿತಗೊಂಡಿರುವುದು, ವ್ಯಾಖ್ಯಾನಿಸಲ್ಪಟ್ಟಿರುವುದು ಪುರುಷರಿಂದ. ಈ ನಾಟಕ ಬರೆದವರು, ನಿರ್ದೇಶಿಸಿದವರು, ನಟನೆಯ ಅರ್ಥಗಳನ್ನು ವ್ಯಾಖ್ಯಾನಿಸಿದವರು ಪುರುಷರು. ಅವರು ತಮಗೆ ಮುಖ್ಯವಾದ ಹಾಗೂ ಶೂರರ ಪಾತ್ರವನ್ನು ಕೊಟ್ಟುಕೊಂಡಿರುತ್ತಾರೆ. ಸ್ತ್ರೀಯರಿಗೆ ಪೋಷಕ ಪಾತ್ರಗಳನ್ನು ನೀಡಿರುತ್ತಾರೆ.
>
> ಬೇರೆ ಶಬ್ದಗಳಲ್ಲಿ ಹೇಳಬೇಕೆಂದರೆ ಸಮಸ್ಯೆಯಿರುವುದು ಸ್ತ್ರೀಯರು ಏನು ಮಾಡುತ್ತಾರೆ ಅಥವಾ ಏನಾಗಿದ್ದಾರೆ ಎಂಬುದರಲ್ಲಿಲ್ಲ, ಅದು ಇರುವುದು ಹೇಗೆ ಅವರು **ಮೌಲ್ಯೀಕರಣಗೊಂಡಿದ್ದಾರೆ** ಮತ್ತು **ಯಾರು ಮೌಲ್ಯಗಳನ್ನು ಜನರಿಗೆ ನೀಡುವ ಹಕ್ಕು ಹೊಂದಿದ್ದಾರೆ ಎಂಬುದರಲ್ಲಿ ಪಿತೃ** ಪ್ರಾಧಾನ್ಯತೆಯಲ್ಲಿ ಸ್ತ್ರೀಯರು ಸಂಪೂರ್ಣವಾಗಿ ಅಧಿಕಾರ ಅಥವಾ ಗೌರವದಿಂದ ಹೊರಗಿದ್ದಾರೆ ಎಂಬುದಲ್ಲ–ಸಮಸ್ಯೆಯಿರುವುದು ಚೌಕಟ್ಟಿನಲ್ಲಿಯೇ ಹಾಗೂ ಈ ಚೌಕಟ್ಟು ಪುರುಷರಿಂದ ನಿರ್ಧರಿಸಲ್ಪಟ್ಟಿದೆ ಎಂಬುದರಲ್ಲಿ.

**ಪ್ರ : ಆದರೆ ಸ್ತ್ರೀಯರೂ ಸಹ ಪುರುಷರ ಪ್ರಾಧಾನ್ಯತೆಯನ್ನು ಬೆಂಬಲಿಸುತ್ತಾರೆ. ಅವರ ಸಹಕಾರವಿಲ್ಲದೇ ಪಿತೃ ಪ್ರಾಧಾನ್ಯತೆ ಅಸ್ತಿತ್ವದಲ್ಲಿ ಇರುವುದಿಲ್ಲ. ಅವರು ಯಾಕೆ ಹಾಗೆ ಮಾಡುತ್ತಾರೆ ?**

**ಉ** : ಅನೇಕ ಸಂಕೀರ್ಣ ಕಾರಣಗಳಿಂದಾಗಿ. ಇದರಲ್ಲಿ ಕೆಲವು ಪರಿಚಿತವಾದವುಗಳು. ಉದಾಹರಣೆಗೆ : ಸ್ಥಳೀಯ ಸೈನಿಕರ, ಪೋಲೀಸರ, ನಾಗರೀಕ ನೌಕರರ ಸಹಾಯವಿಲ್ಲದೆಯೇ ಕೆಲವೇ ಮಂದಿ ಬ್ರಿಟೀಷ್ ಆಳ್ವಿಕೆಗಾರರು ದೊಡ್ಡ ದೇಶಗಳು ಹಾಗೂ ಕಾಂಟಿನೆಂಟ್‌ಗಳನ್ನು ಆಳುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ ಎಂಬುದು ನಮಗೆ ಗೊತ್ತಿದೆ. ಗುಲಾಮರ ಧ್ವನಿತ ಸಹಕಾರವಿಲ್ಲದಿದ್ದರೆ ಗುಲಾಮಗಿರಿ ಅಷ್ಟೊಂದು ದೀರ್ಘ ಕಾಲ ಉಳಿಯುತ್ತಿರಲಿಲ್ಲ. ಇದು ಸ್ತ್ರೀಯರ ವಿಚಾರಧಾರೆಯಿಂದ ಮುಕ್ತರಾಗಿಲ್ಲ, ಮತ್ತು ನಾವು ಮೊದಲೇ ಹೇಳಿದ ಹಾಗೆ ಅವರು ಇದರಿಂದ ಕೆಲವು ಲಾಭಗಳನ್ನು ನಿಜವಾಗಿಯೂ ಪಡೆದುಕೊಳ್ಳುತ್ತಾರೆ. ಜೊತೆಗೆ ಸಂಕೀರ್ಣವಾಗಿರುವ ಸಂಬಂಧಗಳೂ ಸಹ ಅವರ ಸಹಕಾರ ಅಥವಾ ಭಾಗತ್ವವನ್ನು– ಕೆಲವು ಸ್ತ್ರೀವಾದಿಗಳು ಕರೆಯುವ ಹಾಗೆ-ಕಾರ್ಯಶೀಲತೆಯಿಂದ ಇಟ್ಟಿರುತ್ತವೆ. ಜರ್ಡಾ ಲರ್ನರ್ ಪ್ರಕಾರ, ಈ ರೀತಿಯ ಸಹಕಾರ ವಿವಿಧ ಬಗೆಗಳಿಂದ ಪಡೆಯಲ್ಪಟ್ಟಿದೆ. ಲಿಂಗಾಧಾರಿತ ಬೋಧನೆ, ಶಿಕ್ಷಣ ದೊರಕದಿರುವಿಕೆ, ಸ್ತ್ರೀಯರಿಗೆ ಅವರ ಇತಿಹಾಸದ ಬಗ್ಗೆಗಿನ ಜ್ಞಾನದ ನಿರಾಕರಣೆ, ಸ್ತ್ರೀಯರ ಲೈಂಗಿಕ ಚಟುವಟಿಕೆಗಳಿಗನುಸಾರವಾಗಿ ಅವರನ್ನು 'ಗೌರವಾನ್ವಿತೆ', ಮತ್ತು 'ದಾರಿತಪ್ಪಿದವಳು' ಎಂದು ವ್ಯಾಖ್ಯಾನಿಸುವ ಮೂಲಕ, ಸ್ತ್ರೀಯರನ್ನು ಒಬ್ಬರಿಂದ ಇನ್ನೊಬ್ಬರನ್ನು ಒಡೆಯುವುದರಿಂದ ; ನಿರ್ಬಂಧತೆ ಮತ್ತು ಕಣ್ಣಿಗೆ ರಾಚುವ ದಬ್ಬಾಳಿಕೆಯಿಂದ ಆರ್ಥಿಕ ಸಂಪನ್ಮೂಲಗಳು ಮತ್ತು ರಾಜಕೀಯ ಶಕ್ತಿಯ ಪಡೆಯುವಿಕೆಗಳಲ್ಲಿರುವ ತಾರತಮ್ಯದಿಂದ, ವರ್ಗದ ಸವಲತ್ತುಗಳನ್ನು ಕೊಡುವುದರ ಮೂಲಕ **ಪಿತೃತ್ವದ ಪ್ರಾಧಾನ್ಯತೆ** ಎಂದು ಕರೆಯಲ್ಪಟ್ಟಿರುವ ಪಿತೃ ಪ್ರಾಧಾನ್ಯತೆಗೆ ಹೆಂಗಸರ ಒಪ್ಪಿಗೆ ಸಹಕಾರ ಪಡೆದುಕೊಳ್ಳಲಾಗಿದೆ.

ಎಲ್ಲಿಯವರೆಗೆ 'ಒಬ್ಬ ಪುರುಷನ ರಕ್ಷಣೆಯಲ್ಲಿ' ಇರುತ್ತಾಳೆಯೋ ಅಲ್ಲಿಯವರೆಗೆ ಸ್ತ್ರೀಯರು ತಮ್ಮ ವರ್ಗದ ಪುರುಷರ ಸವಲತ್ತುಗಳನ್ನು ಯಾವಾಗಲೂ ಹಂಚಿಕೊಂಡಿದ್ದಾರೆ. ಸ್ತ್ರೀಯರಿಗೆ, ಕೆಳವರ್ಗದವರ ಹೊರತಾಗಿ, ಒಮ್ಮತ ಒಪ್ಪಂದ ಹೀಗೆ ಇರುತ್ತದೆ. ಲೈಂಗಿಕತೆಗೆ, ಆರ್ಥಿಕತೆಗೆ, ರಾಜಕೀಯವಾಗಿ ಹಾಗೂ ಬೌದ್ಧಿಕವಾಗಿ ಪುರುಷರಿಗೆ ಶರಣಾಗುವುದರಿಂದ ಬದಲಿಗೆ ಅವರು ತಮ್ಮ ವರ್ಗದ ಪುರುಷರ ಅಧಿಕಾರ ಹಂಚಿಕೊಂಡು ಕೆಳವರ್ಗದ ಪುರುಷರು ಹಾಗೂ ಸ್ತ್ರೀಯರನ್ನು ಶೋಷಿಸಬಹುದಾಗಿದೆ.

ಸವಲತ್ತನ್ನು ಕಾಯ್ದುಕೊಳ್ಳುವುದಕ್ಕೋಸ್ಕರವೇ ಸ್ತ್ರೀಯರು ಯಾವಾಗಲೂ ತಮ್ಮ ಚೌಕಾಸೀ ಶಕ್ತಿಯನ್ನು ಮರುಸಂಧಾನ ಮಾಡುತ್ತಿರುತ್ತಾರೆ, ಹೇಳಬೇಕೆಂದರೆ, ಕೆಲವು ಸಂದರ್ಭಗಳಲ್ಲಿ ಇತರೇ ಹೆಂಗಸರ ಬದುಕಿನ ವೆಚ್ಚದಲ್ಲಿ. ಆದರೆ ಮುಖ್ಯವಾದುದೆಂದರೆ ನಾವು ಇಡಿಯ ವ್ಯವಸ್ಥೆಯ ಕಡೆ ನೋಡಬೇಕು ಮತ್ತು ಇದರಹಿಂದಿರುವ ಕಾರಣಗಳನ್ನು ವಿಶ್ಲೇಷಿಸಬೇಕು. ಸ್ತ್ರೀಯರು ತಮ್ಮ ಗಂಡು ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆ, ಹೆಣ್ಣು ಮಕ್ಕಳನ್ನು ವಿದ್ಯಾಭ್ಯಾಸದಿಂದ ವಂಚಿತರನ್ನಾಗಿ ಮಾಡುತ್ತಾರೆ. ಅವರ ಸ್ವಾತಂತ್ರ್ಯಕ್ಕೆ ತಡೆಯೊಡ್ಡುತ್ತಾರೆ, ಸೊಸೆಯಂದಿರನ್ನು ಕೆಟ್ಟದ್ದಾಗಿ ನಡೆಸಿಕೊಳ್ಳುತ್ತಾರೆ. ಎಂಬುದೇನೋ ನಿಜ. ಆದರೂ ಕುಟುಂಬ ಮತ್ತು ಸಮಾಜದಲ್ಲಿ ಪುರುಷರು ಮತ್ತು ಹೆಂಗಸರು ಹೊಂದಿರುವ ಅಧಿಕಾರ ಮತ್ತು ಸ್ಥಾನಮಾನಗಳ ಸಂದರ್ಭದಲ್ಲಿ ಇವೆಲ್ಲವೂ ವಿವರಿಸಲ್ಪಡುವ ಅಗತ್ಯ ಇದೆ. ಒಬ್ಬ ಹಳ್ಳಿಗಾಡು ಹೆಂಗಸು ಇದನ್ನು ಚಿತ್ರಮಯವಾಗಿ ವಿವರಿಸಿಳು : ಅವಳು ಹೇಳಿದಳು

"ಪುರುಷರು ನಮ್ಮ ಕುಟುಂಬಗಳಲ್ಲಿ ಸೂರ್ಯನಿದ್ದ ಹಾಗೆ, ಅವರಿಗೆ ಅವರದೇ ಆದ ಬೆಳಕಿದೆ, (ಅವರು ಸಂಪನ್ಮೂಲ ಹೊಂದಿದ್ದಾರೆ, ಆದಾಯವಿದೆ, ಚಲನಶೀಲರು. ನಿರ್ಧಾರಗಳನ್ನು ತೆಗೆದುಕೊಳ್ಳುವ ಸ್ವಾತಂತ್ರ್ಯವಿದೆ ಇತ್ಯಾದಿ.) ಸ್ತ್ರೀಯರು ಉಪಗ್ರಹಗಳಿದ್ದ ಹಾಗೆ. ಅವರಿಗೆ ಅವರದೇ ಬೆಳಕಿಲ್ಲ. ಸೂರ್ಯನ ಬೆಳಕು ತಗಲಿದಾಗ ಮಾತ್ರ ಅವರು ಬೆಳಗುತ್ತಾರೆ. ಹಾಗಾಗಿಯೇ ಸ್ತ್ರೀಯರು ಹೆಚ್ಚು ಸೂರ್ಯನ ಬೆಳಕನ್ನು ಪಡೆಯಲು ತಮ್ಮ ತಮ್ಮೊಳಗೇ ನಿರಂತರವಾಗಿ ಸ್ಪರ್ಧಿಸಬೇಕಾಗುತ್ತದೆ, ಯಾಕೆಂದರೆ ಈ ಬೆಳಕಿಲ್ಲವೆಂದರೆ ಅವರಿಗೆ ಚೇತನವೇ ಇಲ್ಲ."

**ಪ್ರ : ಪುರುಷರಾಗಿರುವ ಕಾರಣದಿಂದ ಎಲ್ಲಾ ಪುರುಷರೂ ಪಿತೃ ಪ್ರಾಧಾನ್ಯತೆಯಿಂದ ಸವಲತ್ತುಗಳನ್ನು ಪಡೆಯುತ್ತಾರೆಯೇ ?**

**ಉ** : ಹೌದು ಮತ್ತು ಇಲ್ಲ. ಏಕೆಂದರೆ ಗಂಡಸರು ಅವರಿಗೆ ಇಷ್ಟವೋ, ಇಲ್ಲವೋ ಪುರುಷರಾಗಿರುವ ಕಾರಣದಿಂದ ಕೆಲವು ಸವಲತ್ತುಗಳನ್ನು ಸಂತೋಷಿಸುತ್ತಾರೆ. ಬಂಡವಾಳಶಾಹಿಗಳಿಗೆ ಹೋಲಿಸಿದಾಗ ಅಧಿಕಾರವಿಲ್ಲದ ಕಾರ್ಮಿಕ ಪುರುಷರೂ ಸಹ ತಮ್ಮ ಸ್ತ್ರೀಯರ ಮೇಲೆ ಅಧಿಕಾರ ಹೊಂದಿರುತ್ತಾರೆ. ದಕ್ಷಿಣ ಏಶಿಯಾದಲ್ಲಿ ಎಲ್ಲಾ ಪುರುಷರೂ ಚಲನಶೀಲರಾಗಿರುತ್ತಾರೆ, ಸಂಪನ್ಮೂಲಗಳ ಪಡೆಯುವಿಕೆಯ ಜೊತೆಗೆ ಆಹಾರ ಹಾಗೂ ಆರೋಗ್ಯದಂತಹ ಮೂಲಭೂತ ಸಂಗತಿಗಳನ್ನು ಪಡೆದಿರುತ್ತಾರೆ. ಮೊದಲೇ ಚರ್ಚಿಸಿದ ಹಾಗೆ ಸಾಮಾಜಿಕ, ಧಾರ್ಮಿಕ, ಕಾನೂನು ಮತ್ತು ಸಾಂಸ್ಕೃತಿಕ ಆಚರಣೆಗಳೂ ಸಹ, ಪುರುಷರಾಗಿರುವುದರಿಂದ ಅನೇಕ ಸವಲತ್ತುಗಳನ್ನು ನೀಡಿವೆ, ಇದರಿಂದಾಗಿಯೇ, ಎಲ್ಲಾ ಕ್ಷೇತ್ರಗಳಲ್ಲಿಯೂ ಸಹ ಅವರಿಗೆ ಹೆಚ್ಚು ಹಕ್ಕುಗಳನ್ನು ನೀಡಲಾಗಿದೆ.

ಆದರೆ ಇನ್ನೊಂದು ಅರ್ಥದಲ್ಲಿ ಗಂಡಸರೂ ಸಹ ಪಿತೃಪ್ರಾಧಾನ್ಯತೆಯಿಂದ ಅನೇಕ ಪ್ರತಿಕೂಲ ಪರಿಸ್ಥಿತಿಯನ್ನು ಅನುಭವಿಸುತ್ತಾರೆ.

ಸ್ತ್ರೀಯರ ಹಾಗೆ ಅವರೂ ಸಹ ಕೆಲವೊಂದು ಪಾತ್ರಗಳನ್ನು ನಿರ್ವಹಿಸುವುದರಲ್ಲಿ ಪಡಿಯಚ್ಚುಗಳಾಗಿದ್ದಾರೆ. ಅವರಿಗೆ ಇಷ್ಟವೋ, ಇಲ್ಲವೋ ಹೀಗೆಯೇ ನಿರ್ಧಿಷ್ಟವಾಗಿ ವರ್ತಿಸಬೇಕೆಂದು ಅವರಿಂದ ನಿರೀಕ್ಷಿಸಲಾಗುತ್ತದೆ. ಅವರೂ ಸಹ ಸಾಮಾಜಿಕ ಹಾಗೂ ಇತರ ಭಾರಗಳನ್ನು ಒಂದು ನಿರ್ಧಿಷ್ಟ ರೀತಿಯಲ್ಲಿಯೇ ನೆರವೇರಿಸಬೇಕಾಗುತ್ತದೆ. ಶಾಂತರಾಗಿರುವ ಹಾಗೂ ವಿನೀತರಾಗಿರುವ ಪುರುಷರಿಗೆ ಕಿರುಕುಳ ನೀಡಲಾಗುತ್ತದೆ ಹಾಗೂ ಸಿಸೀಸ್ (sissies) ಎಂದು ಅವಮಾನಿಸಲಾಗುತ್ತದೆ. ತಮ್ಮ ಹೆಂಡತಿಯೊಡನೆ ಸಮಾನವಾಗಿ ನಡೆದುಕೊಳ್ಳುವವರನ್ನು ಹೆಣ್ಣಿಗ ಎಂದು ಕರೆಯಲಾಗುತ್ತದೆ. ಕಥಕ್ ನೃತ್ಯದಲ್ಲಿ ತರಬೇತಿ ಪಡೆಯುವುದು, ಹಾಗೂ ಹೊಲಿಗೆ, ನಿಟ್ಟಿಂಗ್‌ಗಳಂತಹ ಸ್ತ್ರೀತನದ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದ

ಪುರುಷನೊಬ್ಬ 'ನಿಜವಾದ ಗಂಡಸಾಗಲು ಯೋಗ್ಯನಲ್ಲ' ಎಂದು ಯಾವಾಗಲೂ ಹಾಸ್ಯದ ವಸ್ತುವಾಗಿದ್ದ ವ್ಯಕ್ತಿಯ ಪರಿಚಯ ನನಗಿದೆ.

ಪುರುಷರಿಗೂ ಸಹ ನಿಷ್ಕಪಟವಾಗಿರುವ ಆಯ್ಕೆಗಳನ್ನು ತಿರಸ್ಕರಿಸಲಾಗಿದೆ. ಮುಖ್ಯ ಪ್ರವಾಹದಿಂದ ಹೊರಗೆ ಹೆಜ್ಜೆ ಇಡುವ ಆಯ್ಕೆ ಅವರಿಗಿಲ್ಲ, ಕೊಡುವ ಹಾಗೂ ಸಂರಕ್ಷಕನಾಗಿಯೇ ಆತ ಇರಬೇಕಾಗುತ್ತದೆ. ವಿದ್ಯಾವಂತ ಯುವಕನೊರ್ವ 'ಕೆಲಸ ಮಾಡುವುದಿಲ್ಲ' ವೆಂದರೆ, 'ಮನೆಯನ್ನು ನೋಡಿಕೊಳ್ಳುತ್ತೇನೆ' ಎಂದರೆ ನಂಬಲಾರದೇ ಹಾಗೂ ಸಿಡುಕಿನಿಂದ ಹುಬ್ಬೇರಿಸುವವರಿದ್ದಾರೆ. 'ಆ ತರಹೆಯ ಉತ್ತರಗಳು ಹೆಂಗಸರಿಗೆ ಯೋಗ್ಯ ಗಂಡಸರಿಗಲ್ಲ' ಎಂದು ಆತನಿಗೆ ಹೇಳಲಾಗುತ್ತದೆ.

ಆದರೆ ಎರೆಡು ಮುಖ್ಯ ಕಾರಣಗಳಿಂದ ಈ ಅಮಾನವೀಯತೆಯನ್ನು ಸ್ತ್ರೀಯರ ತುಳಿತಕ್ಕೆ ಹೋಲಿಸಲಾಗುವುದಿಲ್ಲ. ಅಥವಾ ಸಮಾನಾಂತ ಗೊಳಿಸಲಾಗುವುದಿಲ್ಲ, ಒಂದು-ಎಲ್ಲಾ ಪುರುಷರೂ ಇಂತಹದನ್ನು ಅನುಭವಿಸುವುದಿಲ್ಲ, ಮತ್ತು ಇದರಿಂದಾಗಿಯೇ ಅವರು ತಾರತಮ್ಯಕ್ಕೊಳಗಾಗಿಲ್ಲ ಅಥವಾ ಗಣನೀಯವಾಗಿ ಅಸಮರ್ಥರಾಗಿಲ್ಲ.

**ಪ್ರ : ಕೇರಳದಲ್ಲಿರುವ ನಾಯರ ಸಮುದಾಯಗಳು ಅಥವಾ ಮಾತೃ ಪ್ರಧಾನವಾಗಿರುವ ಸಮಾಜಗಳ ವಿಚಾರ ಹೇಗೆ ?**

**ಉ :** ನಿಜವಾಗಿಯೂ ಮಾತೃ ಪ್ರಾಧಾನ್ಯ ಅಸ್ತಿತ್ವದಲ್ಲಿದ್ದ ಬಗ್ಗೆ ನಿಜವಾದ ಚಾರಿತ್ರಿಕ ಸಾಕ್ಷಿ ಇಲ್ಲ. ಕೆಲವು ಸಮಯ **ಮಾತೃವಂಶಾವಳಿ** ಅಥವಾ **ಮಾತೃ ಸ್ಥಳೀಯ** ವ್ಯವಸ್ಥೆಗಳನ್ನು ಜನರು ಮಾತೃ ಪ್ರಧಾನತೆಯ ಜೊತೆ ತಪ್ಪು ಕಲ್ಪನೆ ಮಾಡುತ್ತಾರೆ. ಕೇರಳದ ನಾಯರ್ಸ್‌ರಲ್ಲಿ ಅಸ್ತಿತ್ವದಲ್ಲಿದ್ದದ್ದು ಮಾತೃ ವಂಶಾವಳಿ ಮತ್ತು ಸ್ಥಳೀಯತೆಗಳು ಈ ಪಾರಿಭಾಷಿಕಗಳನ್ನು ಬಿಡಿಸಿ ನೋಡುವುದು ಅಗತ್ಯ. ಮಾತೃ ವಂಶಾವಳಿಯ ಸಮಾಜದಲ್ಲಿ ವಂಶಾವಳಿ ತಾಯಿಯಿಂದ ಗುರುತಿಸಲ್ಪಟ್ಟಿದೆ. ಆದರೆ ಆ ಸ್ತ್ರೀಯು ತಾಯಿಂದಿರಿಂದ ಹೆಣ್ಣು ಮಕ್ಕಳಿಗೆ ಕೊಡಲ್ಪಡುತ್ತದೆ. ಈ ತರಹೆಯ ಸಮುದಾಯಗಳು ಮಾತೃ ಸ್ಥಳೀಯತೆಗಳೂ ಕೂಡಾ ಆಗಿರಬಹುದು, ಅಂದರೆ ಗಂಡನಾದವನು ಹೆಂಡತಿಯ ಮನೆಗೇ ಬಂದು ವಾಸಿಸುತ್ತಾನೆ, ಆಕೆ ಆಕೆಯ ಮನೆಯಲ್ಲಿಯೇ ಇರುತ್ತಾಳೆ. ಮಾತೃ ವಂಶಾವಳಿ ಹಾಗೂ ಮಾತೃ ಕಾರ್ಯಸ್ಥಾನ (ಸ್ಥಳೀಯ) ಸಮಾಜಗಳಲ್ಲಿ ಸ್ತ್ರೀಯರ ಸ್ಥಾನಮಾನ ಹೆಚ್ಚು ಉತ್ತಮವಾಗಿದ್ದಾಗೂ ಕೂಡಾ ಅವು ಮಾತೃ ಪ್ರಾಧಾನ್ಯತೆ ಇದ್ದವುಗಳಲ್ಲ. ಮಾತೃ ಪ್ರಾಧಾನ್ಯತೆಯಲ್ಲಿ ಸ್ತ್ರೀಯರು ಪ್ರಧಾನ ಸ್ಥಾನ, ಮಾನದಲ್ಲಿ ಇರಬಹುದು, ಪ್ರಭುತ್ವ, ಧಾರ್ಮಿಕ ಸಂಸ್ಥೆಗಳು. ಆರ್ಥಿಕ ಉತ್ಪಾದನೆ, ವ್ಯಾಪಾರೋದ್ಯಮ ಇತ್ಯಾದಿಗಳ ಮೇಲೆ ನಿಯಂತ್ರಣ ಹೊಂದಿರಬಹುದು. ಮಾತೃ ಪ್ರಧಾನ ಸಮಾಜಗಳಲ್ಲೂ ಸಹ ನಿಜವಾದ ನಿಯಂತ್ರಣ ಹೊಂದಿರಬಹುದು. ಮಾತೃ ಪ್ರಧಾನ ಸಮಾಜಗಳಲ್ಲೂ ಸಹ ನಿಜವಾದ ನಿಯಂತ್ರಣ ಅಣ್ಣಂದಿರ ಹಾಗೂ ಚಿಕ್ಕಪ್ಪಂದಿರ ಕೈಯಲ್ಲಿ ಇರುತ್ತದೆ, ಆದರೆ ಈ ರೀತಿಯ ವ್ಯವಸ್ಥೆಗಳಲ್ಲಿ ಸ್ತ್ರೀಯರ ಸ್ಥಾನಮಾನ ಬೇರೆಯದರಗಿಂತ ಹೆಚ್ಚು ಉತ್ತಮವಾಗಿತ್ತೆಂಬುದನ್ನು ತಿರಸ್ಕರಿಸುವಂತಿಲ್ಲ.

ಪಿತೃ ಪ್ರಧಾನತೆಯ ವಿಚಾರಧಾರೆ, ಕಾನೂನು ವ್ಯವಸ್ಥೆಗಳು. ಸಾಂಪ್ರದಾಯಿಕ ಹಾಗೂ ಸಮುದಾಯ ವೈವಿಧ್ಯತೆಯನ್ನು ಸ್ಥಳ ಪಲ್ಲಟ ಮಾಡಿದ್ದರಿಂದ ಮತ್ತು ಏಕತೆಯನ್ನು ಒತ್ತಾಯಿಸುವ **"ಆಧುನಿಕತೆಯ"** ವ್ಯಾಪಿಸುವಿಕೆಯ ಒತ್ತಡಗಳಿಂದ ಕೇರಳದ ನಾಯರ್ಸ್‌ಗಳಲ್ಲಿ ಹಾಗೂ ಭಾರತದ ನಾರ್ತ್-ಈಸ್ಟ್‌ನಲ್ಲಿ ಅಸ್ತಿತ್ವದಲ್ಲಿದ್ದ ಮಾತೃ ವಂಶಾವಳಿ ಹಾಗೂ ಮಾತೃ ಸ್ಥಳೀಯತೆಯ ವ್ಯವಸ್ಥೆಗಳು ಬದಲಾಗುತ್ತಿರುವುದಲ್ಲದೇ ಕಣ್ಮರೆಯಾಗತೊಡಗಿವೆ. ಕುಟುಂಬಗಳನ್ನು ವಂಶಾವಳಿಯನ್ನು, ವಸತಿ, ಶ್ರಮ ಮುಂತಾದವುಗಳನ್ನು ಸಂಘಟಿಸಬಹುದು ಹಾಗೂ ಸಂಘಟಿತನಾಗಿದ್ದವು ಎಂಬುದನ್ನು ಇವುಗಳ ಅಸ್ತಿತ್ವವೇ ಧೃಢೀಕರಿಸುತ್ತವೆ. ಹಾಗೂ ಇದೇ ಸ್ಥಿರ ಎನ್ನುವ ಅಥವಾ ಮಾರ್ಪಾಟು ಮಾಡಲಾಗದ ಒಂದು ವ್ಯವಸ್ಥೆ ಇಲ್ಲ. ಇದು ಎಷ್ಟೆಂದರೂ ಪುರುಷ ನಿರ್ಮಿತವಾದುದೇ ಹೊರತ ದೈವ ನಿರ್ಮಿತವಾದುದಲ್ಲ.

**ಪ್ರ : ಕಳೆದ ನೂರು ಅಥವಾ ಇನ್ನಿತರ ವರ್ಷಗಳಲ್ಲಿ ಪಿತೃ ಪ್ರಧಾನ್ಯತೆ ಬಹಳಷ್ಟು ಪ್ರಭಲವಾಗಿದೆ ಎಂಬುದನ್ನು ನೀವು ಧ್ವನಿಸುವಂತಿದೆಯಲ್ಲವೇ?**

**ಉ :** ಈ ಪ್ರಶ್ನೆಗೆ ಹೀಗೇ ಎಂದು ಉತ್ತರ ಕೊಡುವುದು ಸುಲಭವಲ್ಲ. ಇದು ಸಂಕೀರ್ಣವಾದ ಸಮಸ್ಯೆ. ಎಲ್ಲಾ

ಸಮಾಜಕ್ಕೆ ಅಥವಾ ಎಲ್ಲಾ ಸಮುದಾಯಗಳಿಗೆ ಸಾಮಾನ್ಯೀಕರಿಸಲು ಸಾಧ್ಯವಾಗುವುದಿಲ್ಲ. ಅನೇಕ ರೀತಿಯಲ್ಲಿ ಸ್ತ್ರೀಯರು ಖಂಡಿತವಾಗಿಯೂ ಹೆಚ್ಚು ಹಕ್ಕುಗಳನ್ನು (ಓಟಿನ ಹಕ್ಕು, ಆಸ್ತಿ ಉದಾಹರಣೆಗೆ) ಹೆಚ್ಚು ಅವಕಾಶಗಳು ಶಿಕ್ಷಣ, ತರಬೇತಿ, ಕೆಲಸಗಳು) ಸಂಚಾರ : ರಾಜಕೀಯ ನಿರ್ಧಾರಗಳಲ್ಲಿ ಸ್ವಲ್ಪ ಭಾಗವಹಿಸುವ ಅವಕಾಶಗಳನ್ನು ಗಳಿಸಿದ್ದಾರೆ. ಸ್ತ್ರೀಯರ ಶೋಷಣೆಯ ಬಗ್ಗೆ ಹಾಗೂ ವ್ಯವಸ್ಥಿತವಾಗಿ ಹೋರಾಡುವ ಅಗತ್ಯದ ಬಗ್ಗೆಯೂ ಹೆಚ್ಚಿನ ತಿಳುವಳಿಕೆ ಮೂಡಿದೆ. ಬದಲಾವಣೆಗೋಸ್ಕರ ಸ್ತ್ರೀಯರು ತಾವೇ ಸಂಘಟಿತರಾಗಿದ್ದಾರೆ. ಆದರೆ ಇನ್ನಿತರ ಕಡೆಗಳಲ್ಲಿ ಸ್ತ್ರೀಯರು ದುಸ್ಥಿತಿಯಲ್ಲಿದ್ದಾರೆ. ಅವರ ಮೇಲಿನ ಹಿಂಸಾಚಾರ ತೀಕ್ಷ್ಣವಾಗಿ ಹೆಚ್ಚಾಗಿವೆ. ಮಾಧ್ಯಮಗಳಲ್ಲಿ ಅವರನ್ನು ವಸ್ತುವಾಗಿಸಿರುವುದು ಮತ್ತು ಸ್ತ್ರೀಯರ ಲೈಂಗಿಕತೆಯ ವಾಣಿಜ್ಯೀಕರಣ ಭೀಕರ ಪ್ರಮಾಣಕ್ಕೆ ತಲುಪಿದೆ. ಭಾರತದಲ್ಲಿ ವರದಕ್ಷಿಣೆಯ ಕಲ್ಪನೆಯೇ ಇರದ ಸಮುದಾಯಗಳಲ್ಲಿಯೂ ಸಹ ಈಗ ವರದಕ್ಷಿಣೆ ಅನುಸರಿಸಲ್ಪಡುತ್ತಿದೆ. ಸ್ತ್ರೀ ಭ್ರೂಣ ಹತ್ಯೆ ಗೊತ್ತಿರದ ಕಡೆಯಲ್ಲಿಯೂ ಬಾಲೆಯರು ಕೊಲ್ಲಲ್ಪಡುತ್ತಿದ್ದಾರೆ. ಕೆಲವು ಯೋಜನೆಗಳು ಆಂತರಿಕವಾಗಿಯೇ ಪಿತೃಪ್ರಾಧಾನ್ಯವಾಗಿರುತ್ತದೆ ಎಂದು ನೋಡುವ ಅಭಿವೃದ್ಧಿಯ ಯೋಜನೆ ಹಾಗೂ ಆಧುನಿಕತೆಗಳೇ– ಕಮ್ಯುನಿಸ್ಟ್ ಆಗಲೀ ಸಮಾಜವಾದಿ ಅಥವಾ ಬಂಡವಾಳಶಾಹಿಯಾಗಲೀ–ಸ್ತ್ರೀಯರನ್ನು ದುರ್ಬಲಗೊಳಿಸುತ್ತವೆ ಹಾಗೂ ಮತ್ತಷ್ಟು ಅವರನ್ನು ಮೂಲೆಗುಂಪಾಗಿಸುತ್ತವೆ.

ವ್ಯವಸಾಯದಲ್ಲಿ ಪುರುಷರು ಹೆಚ್ಚು ತಾಂತ್ರಿಕ ಶಿಕ್ಷಣ ಮತ್ತು ನೈಪುಣ್ಯತೆ, ಸಾಲ ಮತ್ತು ಮಾರ್ಕೆಟ್‌ಗಳ ಪಡೆಯುವಿಕೆ, ಸಹಕಾರಿ ಸಂಘಗಳಲ್ಲಿ ಸದಸ್ಯತ್ವ ಹೊಂದಿದ್ದಾರೆ. ಇವೆಲ್ಲದರಿಂದಾಗಿ ನಿರ್ಧಾರಗಳಲ್ಲಿ ಮತ್ತು ಸಂಪನ್ಮೂಲಗಳಲ್ಲಿ ಹೆಚ್ಚು ನಿಯಂತ್ರಣವನ್ನು ಹೊಂದಿದ್ದಾರೆ. ವ್ಯವಸಾಯದ ಮುಖ್ಯ ಹೊರೆಯನ್ನು ಹೊರುವುದನ್ನು ಸ್ತ್ರೀಯರು ಮುಂದುವರಿಸಿದ್ದರೂ ಕಡಿಮೆ ಪ್ರಮಾಣದ ನಿರ್ಧರಿತ ಶಕ್ತಿ ಹಾಗೂ ಸಂಪನ್ಮೂಲಗಳ ಮೇಲೂ ಕಡಿಮೆ ಮಟ್ಟದ ನಿಯಂತ್ರಣ ಅವರದಾಗಿದೆ. ಭಾರತದಲ್ಲಿ 1920ರಿಂದ ಸೆಕ್ಸ್ ರೇಷಿಯೋ ಧೃಡಗತಿಯಿಂದ ಸ್ತ್ರೀಯರಿಗೆ ವಿರೋಧವಾಗಿ ಕಡಿಮೆಯಾಗುತ್ತಿದೆ. 1921ರಲ್ಲಿ 1000 ಗಂಡಸರಿಗೆ 975 ಮಹಿಳೆಯರಿದ್ದರು. 1991ರಲ್ಲಿ ಕೇವಲ 929. ವ್ಯಾಪಾರೋದ್ಯಮ ಪ್ರಪಂಚೀಕರಣಗೊಂಡಿರುವುದು, ಅಂತರ್ ರಾಷ್ಟ್ರೀಯ ಮಟ್ಟದಲ್ಲಿ ಬಂಡವಾಳ ಶೇಖರಣೆಯಾಗುತ್ತಿರುವುದರಿಂದ ಶ್ರಮ ಶಕ್ತಿಯಲ್ಲಿ ಸ್ತ್ರೀಯರ ಪಾತ್ರ ಮೂಲಭೂತವಾಗಿ ಬದಲಾವಣೆ ಹೊಂದಿದೆ,

ಇದು ಅವರಿಗೆ ಪ್ರತಿಕೂಲವಾಗಿರುವ ಬದಲಾವಣೆ. ಬ್ರಿಟನ್ನಿನಲ್ಲಿ ಪಿತೃಪ್ರಾಧಾನ್ಯತೆಯ ವ್ಯವಸ್ಥೆಯಲ್ಲಿ ಆಗಿರುವ ಬದಲಾವಣೆಗಳನ್ನು ಪರೀಕ್ಷಿಸುತ್ತಾ ಸಿಲ್ವಿಯಾ ವಾಲ್ ಬೈ ಕೆಲವು ಗುಣಲಕ್ಷಣಗಳನ್ನು ಹೇಳುತ್ತಾಳೆ. ಇವುಗಳು ದಕ್ಷಿಣ ಏಶಿಯಾಕ್ಕೂ ಕೂಡ ಸರಿ ಹೊಂದುತ್ತವೆ. ಅವಳು ಹೇಳುತ್ತಾಳೆ :

> ಪಿತೃ ಪ್ರಧಾನತೆಯು ಹಂತ ಹಾಗೂ ರೂಪ ಎರಡರಲ್ಲೂ ಬ್ರಿಟನ್ನಿನಲ್ಲಿ ಬದಲಾವಣೆಗಳಾಗಿವೆ. ಕಳೆದ ಶತಮಾನದಲ್ಲಿ ವೈಯಕ್ತಿಕದಿಂದ ಸಾರ್ವತ್ರಿಕ ರೂಪದ ಪಿತೃ ಪ್ರಾಧಾನ್ಯತೆಯ ಚಳವಳಿಗಳನ್ನು ಬ್ರಿಟನ್ ಕಂಡಿದೆ. ವೈಯಕ್ತಿಕ ಪಿತೃ ಪ್ರಾಧಾನ್ಯತೆ ಮನೆಗೆಲಸದ ಉತ್ಪಾದನೆಯ ಮೇಲೆ ಅವಲಂಬಿತವಾಗಿದ್ದು, ಅದು ಸ್ತ್ರೀಯರ ಶೋಷಣೆಗೆ ಮುಖ್ಯ ಕಾರಣವಾಗಿದೆ. ಸಾರ್ವಜನಿಕ ಪಿತೃ ಪ್ರಾಧಾನ್ಯತೆ ತಾತ್ವಿಕವಾಗಿ ಸಾರ್ವಜನಿಕ ಕ್ಷೇತ್ರಗಳಾದ ಉದ್ಯೋಗ ಮತ್ತು ಪ್ರಭುತ್ವದಲ್ಲಿ ಇರುತ್ತದೆ. ಸಾರ್ವಜನಿಕ ಆಕಾರದಲ್ಲಿ ಮನೆಗೆಲಸ ಪಿತೃ ಪ್ರಾಧಾನ್ಯತೆಯ ರಚನೆಯಾಗದೇ ಇರುವುದಿಲ್ಲ, ಆದಾಗ್ಯೂ ಅದು ಅಷ್ಟು ಮುಖ್ಯ ಕ್ಷೇತ್ರವಲ್ಲ. ವೈಯಕ್ತಿಕ ಪಿತೃ ಪ್ರಾಧಾನ್ಯತೆಯಲ್ಲಿ ಸ್ತ್ರೀಯರ ಶ್ರಮ ಪಿತೃ ಪ್ರಾಧಾನ್ಯತೆಯ ವ್ಯಕ್ತಿಗಳಿಂದ ಅಪಹರಿಸಲ್ಪಟ್ಟರೆ ಸಾರ್ವಜನಿಕ ಪಿತೃ ಪ್ರಧಾನತೆಯಲ್ಲಿ ಇದು ಸಂಘಟಿತವಾಗಿರುತ್ತದೆ.

ಸ್ತ್ರೀಯರ ಸ್ಥಾನಮಾನ ಉತ್ತಮಗೊಂಡಿದೆಯೋ ಅಥವಾ ಅವನತಿಗೊಂಡಿದೆಯೋ ಎಂಬ ಪ್ರಶ್ನೆಗೆ ಆಕೆ ಹೇಳುತ್ತಾಳೆ, “ಪಿತೃ ಪ್ರಧಾನತೆ ಒಂದು ಚಾರಿತ್ರಿಕ ನಿಯಮವಲ್ಲ. ಕಳೆದ ಶತಮಾನದಲ್ಲಿ ಲಿಂಗಾಧಾರಿತ ಸಂಬಂಧಗಳಲ್ಲಿ ಆದ ಬದಲಾವಣೆಗಳು ಪ್ರಗತಿದಾಯಕ/ ಅವನತಿ ಮತ್ತು ಯಾವುದೇ ಇಡಿಯಾದ ಸವಾಲುಗಳನ್ನು ಒಳಗೊಳ್ಳದಿರುವಂತಹವು ಎಂದು ಅನೇಕ ಬಗೆಯಲ್ಲಿ ವ್ಯಾಖ್ಯಾನಿಸಲ್ಪಟ್ಟಿವೆ. ಲಿಬರಲ್ಸ್ ಲಾಕ್ಷಣಿಕವಾಗಿ ಪ್ರಗತಿದಾಯಕವೆಂದು, ಮಾರ್ಕ್ಸಿಸ್ಟರು ಸ್ತಂಭನದಿಂದ ಹಿಂಬಾಲಿಸಲ್ಪಟ್ಟ ಅವನತಿ ಎಂದು; ರ್‍ಯಾಡಿಕಲ್ ಸ್ತ್ರೀ ವಾದಿಗಳು ಏನೂ ಮಹತ್ತರ ಬದಲಾವಣೆ ಇಲ್ಲದ್ದು ಎಂದು ವ್ಯಾಖ್ಯಾನಿಸಿದ್ದಾರೆ.

## ಮೌನ ಮಾತಾದಾಗ

# ವರದಕ್ಷಿಣೆ ಸಮಸ್ಯೆ

● ಕಲ್ಪನಾ ಭಟ್

ಪ್ರಸ್ತುತ ಸಮಾಜದಲ್ಲಿ 'ವರದಕ್ಷಿಣೆ' ಎಂಬ ಪಿಡುಗು ಎಲ್ಲೆಲ್ಲೂ ಮನೆಮಾತಾಗಿದೆ. ವರದಕ್ಷಿಣೆ ಎಂಬ ಶಬ್ದವನ್ನು ಕೇಳಿದೊಡನೆಯೇ ಮೈಯೆಲ್ಲ ಉರಿಯುವಂತಾಗಿದೆ. ಎಷ್ಟೋ ಮುಗ್ಧೆಯರ ಪ್ರಾಣವನ್ನೇ ಬಲಿತೆಗೆದುಕೊಂಡ ದೊಡ್ಡ ಭೂತ ಇದಾಗಿದೆ. ಇದಕ್ಕೆ ಆಧಾರವಾಗಿ ನನ್ನ ಗೆಳತಿಯ ಸಾವಿನ ಕಥೆ ಮನಸ್ಸಿನಲ್ಲಿ ಅಚ್ಚಳಿಯುವಂತಾಗಿದೆ.

ಒಮ್ಮೆ ನಾನು ನನ್ನ ಗೆಳತಿ ಸುಷಮಾಳನ್ನು ಭೇಟಿ ಮಾಡುವುದಕ್ಕಾಗಿ ಅವರ ಮನೆಗೆ ಹೋದೆ. ಆದರೆ ಅಲ್ಲಿ ನೋಡಿದರೆ ನನ್ನ ಕಣ್ಣನ್ನೇ ನಂಬಲಾರದ ದೃಶ್ಯ ಆ ಗಂಡನೆಂದೆನಿಸಿಕೊಳ್ಳುವ ಒಂದು ವಸ್ತು 'ನಾನೇನು ನಿನ್ನ ಅಂದ ಚೆಂದಕ್ಕೆ ಮರುಳಾಗಿ ನಿನ್ನೊಡನೆ ಚಕ್ಕಂದವಾಡಲು ಮದುವೆಯಾದೆನೆಂದು ತಿಳಿದೆಯಾ ಇಲ್ಲಿ ಬಂದಮೇಲೆ ನಾವು ಹೇಳಿದಂತೆ ನಡೆದುಕೊಳ್ಳಬೇಕು. ಎಲ್ಲಿ ನಿನ್ನ ಒಡವೆ ಹಣಗಳು ? ನನಗೀಗ ಐವತ್ತು ಸಾವಿರ ರೂಪಾಯಿ ಬೇಕಾಗಿದೆ. ತವರಿಗೆ ಹೋಗಿ ತೆಗೆದುಕೊಂಡು ಬಾ ಎಂದು ಅದೆಷ್ಟು ಬಾರಿ ಹೇಳಿದೆ. ಇನ್ನೊಮ್ಮೆ ಬರೀ ಕೈಯಲ್ಲಿ ಬಂದರೆ ಮನೆಯ ಹೊಸ್ತಿಲನ್ನು ದಾಟದಿರು" ಎಂದು ಕಟ್ಟಾಜ್ಞೆಯನ್ನು ಮಾಡುತ್ತ ಕಬ್ಬಿಣದ ಸರಳಿನಲ್ಲಿ ಅವಳನ್ನು ಒಂದೇ ಸಮ ಜಜ್ಜುತ್ತಿತ್ತು. ನಂತರ ಕೆಲವೇ ದಿನಗಳಲ್ಲಿ 'ಆತ್ಮಹತ್ಯೆ' ಮಾಡಿಕೊಂಡಳೆಂಬ ಸುದ್ದಿಯೊಂದು ಊರೆಲ್ಲ ಹರಡಿಕೊಂಡಿತು. ಆದರೆ ಅವಳು ನಿಜವಾಗಿಯೂ ಆತ್ಮಹತ್ಯೆ ಮಾಡಿಕೊಂಡಿದ್ದಳೇ ? ಇಲ್ಲ. ಮದುವೆಗೆಂದು ಮಾಡಿದ ಸಾಲವನ್ನೇ ತೀರಿಸಲು ಪರದಾಡುತ್ತಿರುವ ಬಡ ತಂದೆಯ ಮುಖ ನೋಡಿಯೇ ಸುಮ್ಮನೇ ಹಿಂದಿರುಗಿದ ಅವಳನ್ನು ಗಂಡ–ಅತ್ತೆ ಸೇರಿಕೊಂಡು ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿದರು. ಆದರೆ ನೋಡುವವರ ಕಣ್ಣಿಗೆ ಕೇಳುವವರ ಕಿವಿಗೆ ಇದು ಆತ್ಮಹತ್ಯೆ. ಗಂಡನೋ ಊರಿನ ಜಗಳಕ್ಕೆ ತೀರ್ಪು ಕೊಡುವ ತೀರ್ಪುಗಾರ. ಕಾನೂನು ಕಟ್ಟಳೆಗಳನ್ನು ಓದಿ ತಿಳಿದುಕೊಂಡ ದೊಡ್ಡ ವಿದ್ಯಾವಂತ. ಕೋರ್ಟಿನ ನಿಯಮಗಳೆಲ್ಲಾ ಊರಿಗೆ ಮಾತ್ರವೋ ಅಥವಾ ಇವನಿಗೂ ಅನ್ವಯಿಸುತ್ತದೆಯೋ? ವಿದ್ಯಾವಂತ ಯುವಕರೇ ಈ ರೀತಿ ಮಾಡುತ್ತಿರುವಾಗ ಇನ್ನು ಅವಿದ್ಯಾವಂತರ ಪಾಡೇನು ?

ದೊಡ್ಡ ಸಭೆ ಸಮಾರಂಭಗಳಲ್ಲಿ ಉದ್ದುದ್ದ ಭಾಷಣ ಮಾಡುತ್ತಾರೆ. ವರದಕ್ಷಿಣೆ ತೆಗೆದುಕೊಳ್ಳುವುದು ಮಹಾ ಪಾಪ. ಇದರಿಂದ ನಾವು ಹೆಂಡತಿಯ ಹಂಗಿನಲ್ಲಿದ್ದಂತಾಗುತ್ತದೆ. ಇಂಥವನು ಹೇಡಿ. ಅದ್ದರಿಂದ ಯಾರೂ ವರದಕ್ಷಿಣೆ ತೆಗೆದುಕೊಳ್ಳಬಾರದು ಎಂದು ಆವೇಶಪೂರಿತ ಭಾಷಣ ಮಾಡುತ್ತ ಮೇಜಿಗೆ ಕೈಯ್ಯನ್ನು ಕುಟ್ಟಿ ಹೇಳುತ್ತಾರೆ. ಪತ್ರಿಕೆಗಳಲ್ಲಂತೂ ದಿನಬೆಳಗಾದರೆ ಅದೇ ಸುದ್ದಿ. ಅದರಲ್ಲೂ 'ಪೊಲೀಸ್ ನ್ಯೂಸ್' ಪತ್ರಿಕೆಯಂತೂ ಅದಕ್ಕೇ ಮೀಸಲಾಗಿರುವಂತೆ ಕಾಣಿಸುತ್ತವೆ. ಈ ಕಾನೂನು ನಿಯಮಗಳಲ್ಲಿ ಸಭೆ–ಸಮಾರಂಭ ವೃತ್ತ ಪತ್ರಿಕೆಗಳಿಗೆ ಮಾತ್ರ ಸೀಮಿತವೇ ? ಹಾಗಾದರೆ ಅದನ್ನು ಜಾರಿಗೆ ತರುವವರು ಯಾರು ? ಇದಕ್ಕೆಲ್ಲಾ ಕೊನೆಯೇ ಇಲ್ಲವೇ ?

ಇನ್ನು ಈ 'ಅತ್ತೆ'ಯನ್ನು ತೆಗೆದುಕೊಂಡರೆ ಸೊಸೆಯಂದಿರ ಸಾವಿನಲ್ಲಿ ಪ್ರಮುಖ ಪಾತ್ರ ಇವಳದೇ ಆಗಿರುತ್ತದೆ. ಮಗನಿಗ ಸೊಸೆಯ ಕುರಿತು ಒಂದಕ್ಕೆರಡು ಸೇರಿಸಿ ಚುಚ್ಚುವುದು. ಈ ಪ್ರಾಣಿ ತಾನೂ ಒಂದು ಹೆಣ್ಣು, ತಾನೂ ಮೊದಲು ಸೊಸೆಯಾಗಿ ಕೊನೆಗೆ ಅತ್ತೆಯಾದವಳು ಎಂಬುದನ್ನು ಮರೆತೇಬಿಟ್ಟಿರುತ್ತದೆ. ಅಂದರೆ ಅತ್ತೆಯ ಪಾತ್ರ ಅಷ್ಟೊಂದು ಗ್ರೇಡಿನದೇ ? ಕೆಲವರಂತೂ ಮೊದಲು ತಮ್ಮ ಅತ್ತೆ ಕೊಟ್ಟ ಕಷ್ಟವನ್ನು ಈಗ ಸೊಸೆಯ ಮೇಲೆ ತೋರಿಸಿ ಸೇಡು ತೀರಿಸಿಕೊಳ್ಳುತ್ತಾರೆ. ಹೆಣ್ಣಿನಿಂದಲೇ ಶೋಷಣೆಗೊಳಪಡುವುದು ಇದೊಂದು ವಿಪರ್ಯಾಸವಲ್ಲದೇ ಮತ್ತೇನು ?

ಒಮ್ಮೆ ವಧು ಪರೀಕ್ಷೆಗೆಂದು ಗಂಡಿನವರು ಬಂದಾಗ ವಧುವಿನ ತಂದೆ ಕೇಳಿದರಂತೆ, ನಿಮಗೆ ಹೊನ್ನು ಹೆಣ್ಣು ಎರಡೂ ಬೇಕೆಂದರೆ ಹೇಗಾಗುತ್ತೆ ? ಅದಕ್ಕೆ ಅವರು ಹೇಳಿದರಂತೆ ನಮಗೆ ಹೆಣ್ಣೇನು ಬೇಕೆಂತಲೇ ಇಲ್ಲ, ಹೊನ್ನಿದ್ದರೆ ಸಾಕು ಎಂದು. ಕೆಲವರು ಹೇಳುತ್ತಾರೆ ನಮಗೆ ವರದಕ್ಷಿಣೆ ಬೇಡ, ನಿಮ್ಮ ಮಗಳಿಗೇ ಬಂಗಾರ,

ದುಡ್ಡು ಎಷ್ಟು ಅಂತ ಕೊಟ್ಟುಬಿಡಿ ಎಂದು ಆದರೆ ಅದನ್ನು ಉಪಯೋಗಿಸುವವರು ಇವರೇ. ಹಿಂದೆಲ್ಲ ಗಂಡಿನವರೇ ಹೆಣ್ಣಿನವರಿಗೆ ಹಣ ಕೊಟ್ಟು ಹೆಣ್ಣನ್ನು ಕೊಂಡುಕೊಳ್ಳುತ್ತಿದ್ದರು. (ಮದುವೆ ಮಾಡಿಸಿಕೊಳ್ಳುತ್ತಿದ್ದರು) ಕೊನೆಗೆ ಅದೇ ಪರೋಪಚಾರ ಎಂದು ಗಂಡಿಗೆ ನಾಲ್ಕು ರೂಪಾಯಿ ಕೊಡುವುದು ರೂಢಿಯಲ್ಲಿ ಬಂತು. ಆದರೆ ಈಗ ಕಾಲ ಬದಲಾಗಿದೆ. ಕಲಿಯುಗ ಬಂದಿದೆ. 'ನಾಲ್ಕು' ಎನ್ನುವ ಸಂಖ್ಯೆಗೆ ಬೆಲೆ ಕಡಿಮೆ ಅಂದರೆ ಅದು ಸಣ್ಣ ಸಂಖ್ಯೆ ಮಾಡುತ್ತಿದ್ದಾರೆ. ಇನ್ನು ಬಂಗಾರ ಎಷ್ಟು ಬೇಕು ಎಂದು ಒಂದು ಸಣ್ಣ ಲೀಸ್ಟನ್ನೇ ಹೇಳಿಬಿಡುತ್ತಾರೆ. ಸೊಸೆಗೆ ಕೈಗೆರಡು ಭಳೆ, ಸರೆ, ಓಲೆ ಜುಮುಕಿ ಇತ್ಯಾದಿ.... ವರನಿಗೆ ಚೈನು, ಉಂಗುರ, ವಾಚು... ಕೊಟ್ಟರೆ ಸಾಕು ಎನ್ನುತ್ತಾರೆ. ಅಷ್ಟರೊಳಗೇ ಹೆಣ್ಣಿನ ತಂದೆಗೆ ಒಂದು ಲೋಟ ತಣ್ಣೀರನ್ನು ತಂದುಕೊಡುವ ಪರಿಸ್ಥಿತಿ ಇಂದಿನದಾಗಿದೆ. ಹಾಗಾದರೆ ಹೆಣ್ಣನ್ನು ಹೇಗೆಂದರೆ ಹಾಗೆ ಉಪಯೋಗಿಸಿಕೊಂಡು ಬೇಕೆಂದಾಗ ತರುವುದು ಬೇಡವೆಂದಾಗ ಬಿಡುವುದು ಮಾಡಲು ಇದೇನು "ಮಾರ್ಕೆಟಿನಲ್ಲಿ ಮಾರಾಟಕ್ಕಿರುವ ಗೊಂಬೆಯಂತಹ ವಸ್ತುವೇ ?" ಕೆಲವರು ಖಂಡಿತವಾಗಿಯೂ ಹಾಗೇ ತಿಳಿದುಕೊಂಡಿದ್ದಾರೆ.

ಆದರೆ ಹೀಗಾಗಲು ಬಿಡಬಾರದು. ಇಂದು ಯುವತಿಯರಿಗೂ ಯುವಕರಷ್ಟೇ ಸಮಾನ ಹಕ್ಕಿದೆ. ಅದನ್ನು ಉಪಯೋಗಿಸಿಕೊಳ್ಳಬೇಕು. ವರದಕ್ಷಿಣೆ ಕೇಳುವ ಗಂಡನ್ನು ಮದುವೆಯಾಗಬಾರದು. ಮದುವೆ ಇಲ್ಲದಿದ್ದರೂ ಚಿಂತೆ ಇಲ್ಲ. ವರದಕ್ಷಿಣೆ ಕೊಟ್ಟು ವಿವಾಹವಾಗಲಾರೆ ಎಂದು ಧೃಡ ಮನಸ್ಸನ್ನು ತಂದುಕೊಳ್ಳಬೇಕು ಇದಕ್ಕೆ ಇಂದಿನ ವಿದ್ಯಾವಂತ ಯುವಕರ ಸಹಕಾರವೂ ಅಗತ್ಯ. ಅವರು ಸುಮ್ಮನೆ ಭಾಷಣ, ಲೇಖನಗಳಲ್ಲಿ ಮಾತ್ರ ವ್ಯಕ್ತಪಡಿಸದೇ ಅದನ್ನು ಕಾರ್ಯರೂಪಕ್ಕೆ ತರಬೇಕು. ಹೆಣ್ಣಿನ ಬಗೆಗೆ ಇರುವ ಕೀಳರಿಮೆಯನ್ನು ಕಿತ್ತೊಗೆಯಬೇಕು. ಈ ನಿಟ್ಟಿನಲ್ಲಿ ಈಗಿನ ಯುವಕ-ಯುವತಿಯರು ಧೈರ್ಯದಿಂದ ಮುನ್ನುಗ್ಗಿದ್ದರೆ "ವರದಕ್ಷಿಣೆ" ಎಂಬ ಹೆಸರಿನ ಪೆಡಂಭೂತವನ್ನು ಎಲ್ಲರಿಂದ ದೂರ ಮಾಡಬಹುದು.



## ಮೂರು ಹನಿಗಳು

ಎಲೆಯ ಮರೆಯಲ್ಲಿದ್ದೆ,
ನೆಮ್ಮದಿಯಾಗಿದ್ದೆ.
ಪ್ರಕಾಶಕ್ಕೆ ಒಡ್ಡಿಕೊಂಡ ಕೂಡಲೇ
ದೃಶ್ಯ ಬದಲಾಯಿಸಿತು,
ಈಗ,
ಸುತ್ತಮುತ್ತ ಹಬ್ಬಿ ಹರಡಿಕೊಂಡಿದ್ದ
ಮೊಗ್ಗುಗಳು ಮುಳ್ಳಾಗಿವೆ,
ಹೂಗಳಿಗೆ ನನ್ನಲ್ಲಿ ಔದಾಸೀನ್ಯ,
ಕಾಯಿಗಳು ಹಲ್ಲು ಕಿರಿದಿವೆ,
ಹಣ್ಣುಗಳು ತೆಪ್ಪಗಿವೆ.

● ಡಾ|| ಎಚ್. ಎಸ್. ಸುಜಾತಾ

## ಪ್ರಮಾಣ

ಹೇಳಿದ
ನನ್ನ ಗಂಡ ಬೆಳ
ಗಿನ ಜಾವ ಇಂದಿ
ನಿಂದ ಕುಡಿಯುವುದಿಲ್ಲಾ
ಎಂದು ಮಧ್ಯರಾತ್ರಿ
ಬಂದು ಹೇಳಿದ
ಕುಡಿಯುವುದನ್ನು
ಬಿಡುವದು ಆಗು
ವದಿಲ್ಲವೆಂದು.

● ಜಗದೀಶ ಬಾಳನಗೌಡ್ರ

## ಮಹಿಳೆಯರಿಗೆ ಮಾರಕ ಲಸಿಕೆ

ಭಾರತೀಯ ವೈದಕೀಯ ಸಂಶೋಧನಾ ಮಂಡಳಿಯ ಮಾಜಿ ಕಾರ್ಯದರ್ಶಿ ಡಾ॥ ಎ. ಎಸ್. ಪೈಂಥಲ್ ಅವರು ಡೆಲ್ಲಿಯ ಇನಿಸ್ಟಿಟ್ಯೂಟ್ ಆಫ್ ಇಮ್ಯೂನಾಲಜಿಯು, ಭಾರತೀಯ ಮಹಿಳೆಯರ ಮೇಲೆ ನಡೆಸುತ್ತಿರುವ ಸಂತಾನ ನಿಯಂತ್ರಣ ಲಸಿಕೆಯ ಪ್ರಯೋಗಗಳು ಅನೀತಿಯುಕ್ತವೆಂದು ಆಪಾದಿಸಿದ್ದಾರೆ.

'ವೈದ್ಯಕೀಯ ಸಂಶೋಧನೆಯ ಹೊಣೆಗಾರಿಕೆ' ಕುರಿತು ಉಪನ್ಯಾಸ ನೀಡಿದ ಸಂದರ್ಭದಲ್ಲಿ ಅವರು, ಪ್ರಯೋಗಗಳು ಮಹಿಳೆಯರಿಗೆ ಹಾನಿಕಾರಕವಾದರೂ ಇನ್ನೂ ಜಾರಿಯಲ್ಲಿವೆ ಎಂದು ಹೇಳಿದರು. ಲಸಿಕೆಯು ಹುಟ್ಟು ಹಾಕುವ ಪ್ರತಿಕೂಲ ಜೀವಾಣುಗಳು ನಾರ್ಮಲ್ ಹಾರ್ಮೋನುಗಳೊಂದಿಗೆ ಪ್ರತಿಕ್ರಿಯಿಸುವಾಗ ಅಡ್ಡ ಪರಿಣಾಮ ಉಂಟುಮಾಡುತ್ತವೆ. ಹೀಗಾಗುವುದರಿಂದ ಈ ಹಾರ್ಮೋನುಗಳ ಪರಿಣಾಮ ಹೊಂದಿರುವ ಪಿಟ್ಯೂಟರಿ ಇಲ್ಲವೆ ಇನ್ನಿತರ ಅಂಗಗಳಿಗೂ ಇದರಿಂದ ಕೆಡುಕುಂಟಾಗುತ್ತದೆ. ಪ್ರತಿಕೂಲ ಜೀವಾಣುವನ್ನುಂಟು ಮಾಡಿ, ನೈಸರ್ಗಿಕ ಹಾರ್ಮೋನುಗಳ ಮೇಲೆ ಪರಿಣಾಮ ಬೀರುವ ಯಾವುವೇ ಲಸಿಕೆಯನ್ನು ಪ್ರತಿಪಾದಿಸಬಾರದೆಂದು ಅನೇಕ ಪರಿಣಿತರು ಅಭಿಪ್ರಾಯ ಪಡುತ್ತಾರೆ. ತತ್‌ಕ್ಷಣ ಯಾವುದೇ ಪರಿಣಾಮ ಕಾಣದಿದ್ದರೂ ಮುಂದೆ ಆಗುವ ಪರಿಣಾಮಗಳನ್ನು ಅಲ್ಲಗಳೆಯಲಾಗುವುದಿಲ್ಲ. ಈ ದೃಷ್ಟಿಯಲ್ಲಿ ಮೇಲಿನ ಲಸಿಕೆಗಳಿಗೆ ಹೆಂಗಸರನ್ನು ಒಳಪಡಿಸುವುದು ಅನೀತಿಯುಕ್ತ. ಲಸಿಕೆಗಳ ಚಿಕಿತ್ಸಾ ಪ್ರಯೋಗಗಳ ಸಂಬಂಧದಲ್ಲಿ ವಿಶ್ವ ಆರೋಗ್ಯ ಸಂಸ್ಥೆಯು ಹಮ್ಮಿಕೊಂಡಿರುವ ಮಾರ್ಗದರ್ಶಕಗಳನ್ನು ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯು ಕಟ್ಟುನಿಟ್ಟಾಗಿ ಜಾರಿಗೆ ತರಬೇಕೆಂದು ಡಾ॥ ಪೈಂಥಲ್ ಅವರು ಅಭಿಪ್ರಾಯ ಪಡುತ್ತಾರೆ.

ಅಡ್ಡ ಪರಿಣಾಮವಿದ್ದರೂ, ಔಷಧಿಗಳಿಗೆ ಸಮ್ಮತಿ ನೀಡಬೇಕೆಂಬ ಒತ್ತಡಕ್ಕೆ ತಾವು ಬಲಿಪಶುವಾಗಲಿದ್ದರೆಂದು ಅವರು ಹೇಳಿದರು. ಪ್ರಯೋಗಗಳಿಗೆ ಒಳಗಾದ ಮಹಿಳೆಯ ಮೇಲಾಗುವ ಅನಿಷ್ಟಕರ ಪರಿಣಾಮಗಳಿಗೆ ಯಾರನ್ನು ಜವಾಬ್ದಾರರನ್ನಾಗಿಸಬೇಕು ? ಅಥವಾ ವಿಚಾರಣೆ ನಡೆಸುವರೆ ? ಪ್ರಯೋಗಗಳನ್ನು ಸಮ್ಮತಿಸುವ ಏಜನ್ಸಿಯೇ ? ಅಥವಾ ನೀತಿ ಮಂಡಳಿಯ ಸದಸ್ಯರೆ ? ಅಥವಾ ಕಾರ್ಯದರ್ಶಿಯುವರೆ ? ಎಂಬ ಪ್ರಶ್ನೆಗಳು ಏಳುವುದು ಸಹಜ. ಹಾಗೂ ಜವಾಬ್ದಾರಿಯನ್ನು ಹೊತ್ತುಕೊಳ್ಳುವ ಭಾವನೆಗಳಿಗೆ ಬೆಲೆಯೇ ಇಲ್ಲವೆಂದು, ಸಂಬಂಧಪಟ್ಟ ವಿಜ್ಞಾನಿಗಳಿಗಾಗಲಿ, ವ್ಯಕ್ತಿಗಳಿಗಾಗಲಿ ಜನರ ನೋವು, ಸಾವಿನ ಬಗ್ಗೆ ಕಾಳಜಿಯೇ ಇಲ್ಲವೆಂದು ಪೈಂಥಲ್ ಅವರು ಹೇಳಿದರು. ಒಬ್ಬ ಮೇಲಧಿಕಾರಿಯು ಏಡ್ಸ್ ಬಗ್ಗೆ ತಲೆಕೆಡಿಸಿಕೊಳ್ಳಬಾರದೆಂದು, ಏಡ್ಸ್‌ನಿಂದ ಜನ ಸತ್ತರೆ ಜನಸಂಖ್ಯೆ ಕಡಿಮೆಯಾಗುವುದೆಂದು ನಿರ್ದಯವಾಗಿ ತಮಗೆ ಹೇಳಿದರೆಂದು ಅವರು ತಿಳಿಸಿದ್ದಾರೆ. ರಾಜಕೀಯ ಬೆಂಬಲ ಪಡೆದ, ಏನೂ ಮಾಡಲು ಹೇಸದ ವಿಜ್ಞಾನಿಗಳಿರುವುದು, ಭಾರತೀಯ ವಿಜ್ಞಾನಕ್ಕೆ ತಗುಲಿರುವ ದುರದೃಷ್ಟಕರ ವಿಷಯವೆಂದು ಪೈಂಥಲ್ ಅವರು ಆಪಾದಿಸಿದ್ದಾರೆ.

ಅಮಾಯಕ ಜನರ ಮೇಲುಂಟಾಗುವ ಅನಿಷ್ಟಕರ ಅಡ್ಡ ಪರಿಣಾಮಗಳಿಗೆ ಸಂಬಂಧಪಟ್ಟ ವಿಜ್ಞಾನಿಗಳನ್ನು ಮತ್ತು ಮಂಡಳಿಯ ಕಾರ್ಯದರ್ಶಿಯುವರನ್ನು ಜವಾಬ್ದಾರರನ್ನಾಗಿಸುವ ಕಠಿಣ ಮಾನದಂಡಗಳನ್ನು ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯು ಕಂಡುಕೊಳ್ಳಬೇಕೆಂದು ಅವರು ಹೇಳಿದು.

ಕೃಪೆ : ಟೈಂಸ್ ಆಫ್ ಇಂಡಿಯಾ

---

### ಸರ್ವಸ್ವ – ನರ್ವಸ್ವ

ಮದುವೆ ಆದ ದಿನ
ಹೆಂಡತಿಗೆ ಅಂದ
ನೀನೇ ನನ್ನ ' ಸರ್ವಸ್ವ '
ಮಕ್ಕಳಾದ ಮೇಲೆ ಅಂದ
ಜೀವನ ಎಲ್ಲ ' ನರ್ವಸ್ವ ' [NIL]

● ಅಶೋಕ ಪಾ. ದುರ್ಗದಶಿಮಿ

# ಓದುಗರ ವಿಭಾಗ

ಮಾನಸದ ಪುಟಗಳನ್ನು ತಿರುವಿ ಹಾಕಿದಾಗ ನಿಜಕ್ಕೂ ಅರ್ಥಪೂರ್ಣ ವಿಚಾರವನ್ನು ಒಳಗೊಂಡಿದೆ ಎನಿಸಿತು. ನೈಜ ವಿಚಾರಕ್ಕೆ ಹೆಚ್ಚು ಒತ್ತುಕೊಡಬೇಕು. ಕೇವಲ ಉಗ್ರ ಶಬ್ದಗಳಿಂದ, ವಿಡಂಬನೆಯಿಂದ, ಕ್ರೂರ ಶಬ್ಧಗಳಿಂದ ಸಮಾಜವನ್ನು ನಿಂದಿಸುವುದು ಸರಿಯಲ್ಲ. ಶಾಂತ ರೀತಿಯಿಂದ ಸಮಾಜವನ್ನು ತಿದ್ದುವ ಪ್ರಯತ್ನ ನಿಮ್ಮದಾಗಲಿ, ಅಂದರೆ ಗಂಡಸು ಪಿತೃ ಪ್ರಧಾನ ವ್ಯವಸ್ಥೆಯನ್ನು ಉಗ್ರ ರೀತಿಯಿಂದ ಧೋಷಾರೋಪಣೆ ಮಾಡದೆ ಎಲ್ಲರನ್ನೂ ಸಮಾನ ವಾಗಿ ಸ್ವೀಕರಿಸುವಂತಹ ಮಾರ್ಮಿಕ ಲೇಖನಗಳು ಮೂಡಿಬರಲಿ.

—ಬಸವರಾಜ ತೇಲಿ
ಹಿರೇಬೇವನೂರು, ಇಂಡಿ

ಸ್ತ್ರೀಯರ ಮೇಲೆ ನಡೆಯುತ್ತಿರುವ ಹಿಂಸೆಯ ಸ್ವರೂಪವನ್ನು ಬರೆದರೆ ಸಾಲದು. ಅದಕ್ಕೆ ಪರಿಹಾರ, ಕಾನೂನಿನ ಸಲಹೆ, ಮುಂತಾದವುಗಳನ್ನು ಪ್ರಕಟಿಸಬೇಕು. ಉನ್ನತ ಸ್ಥಾನಕ್ಕೇರಿದ ಮಹಿಳೆಯರ ಸಾಧನೆ, ಸ್ತ್ರೀಯರು ಆರ್ಥಿಕ ಸ್ವಾವಲಂಬಿಯಾಗಲು ಮಾರ್ಗ ಮುಂತಾದವುಗಳನ್ನು ಪ್ರಕಟಿಸಿದರೆ ಒಳ್ಳೆಯದು.

—ಶಿಲ್ಪಾ ಬೈಂದೂರು
ಕಾರವಾರ

ಫೆಬ್ರವರಿ–ಮಾರ್ಚ್ ಸಂಚಿಕೆಯಲ್ಲಿ ಪ್ರಕಟವಾದ "ಸ್ಟೇಯಿಂಗ್ ಅಲೈವ್ (ವಂದನಾಶಿವ) ಒಂದು ಕಿರುಪರಿಚಯ ಹೆಣ್ಣಿನ ಅಡಿ ಮುಡಿಯನ್ನು ವಸ್ತುಸ್ಥಿತಿಯಿಂದ ಪರೆಗಲ್ಲಿಗೆ ಇಟ್ಟಿದೆ. ಪುರುಷ ಮತ್ತು ಮಹಿಳೆಯ ಭಿನ್ನತೆಯಲ್ಲಿ ವಿಶ್ವದ ಎಲ್ಲಾ ವಸ್ತು, ವಿಷಯ, ಸ್ಥಿತಿಗಳನ್ನು ಸೂಕ್ಷ್ಮವಾಗಿ ಅಂತರ ಮೂಡಿಸುತ್ತಾ ನಡೆದಿರುವ ಒಟ್ಟು ವಿಶ್ಲೇಷಣೆ ಮೆಚ್ಚು ವಂತಹದು. ಸೀಮಂತಿನಿ ನಿರಂಜನರ "ಪ್ರಕೃತಿ ಪ್ರಜ್ಞೆ ಮತ್ತು ಹೆಣ್ಣು" ಟಿಪ್ಪಣಿಯಲ್ಲಿ ವಿಭಿನ್ನ ನೆಲೆಯಲ್ಲಿ ಪ್ರಕೃತಿ ಪರಿಸರ ಕಷ್ಟನಿಷ್ಟುರಗಳ ಮಧ್ಯೆ ಇರುವ ವರ್ಗೀಕರಣ ಹೆಚ್ಚು ವಾಸ್ತವವೆನಿಸುತ್ತದೆ. ಸೀಮಂತಿನಿಯವರ ವಿಶ್ಲೇಷಣೆಯಲ್ಲಿ "ಲಿಂಗ, ಜಾತಿ, ವರ್ಗಗಳಂತೆ ಅಂಶಗಳನ್ನು ಸ್ಪಷ್ಟೀಕರಿಸುವ ಸಾಮಾಜಿಕ ಮತ್ತು ಆರ್ಥಿಕ ಚೌಕಟ್ಟಿನೊಳಗೆ ತಮ್ಮ ವಿಶ್ಲೇಷಣೆ ಮುಂದುವರಿಯಬೇಕು" ಎಂದಿರುವುದು ನಿಜಕ್ಕೂ ತುಂಬಾ ಸರಿಯಾದ ಸತ್ಯ ಸ್ಥಿತಿಯನ್ನು ಮನಗಾಣಿಸುತ್ತದೆ.

—ಉತ್ತನೂರು ರಾಜಮ್ಮ ವಿ. ಶೆಟ್ಟಿ
ಚಿಂತಾಮಣಿ

ಜನವರಿ ತಿಂಗಳಲ್ಲಿ ಪತ್ರಿಕೆಯ ನಿರ್ವಹಣೆಯ ಬಗ್ಗೆ ಬರಹ ಓದಿ ಸಂಪಾದಕ ಮಂಡಳಿಯ ಮುಚ್ಚುಮರೆಯಿಲ್ಲದ ಪ್ರಾಮಾಣಿಕ ಆತ್ಮವಿಮರ್ಶೆ ಅತ್ಮಾವಲೋಕನದ ಕಾರ್ಯವೈಖರಿ ಕಂಡು ತಲೆದೂಗುವಂತಾಯಿತು. ನಿಮ್ಮ ಕೆಲಸ ಸಂಸಾರದ ಜವಾಬ್ದಾರಿಗಳನ್ನು ನಿಭಾಯಿಸುತ್ತಾ ಇಷ್ಟೆಲ್ಲಾ ಶ್ರಮವಹಿಸುತ್ತಿರುವುದು ಸ್ತುತ್ಯಾರ್ಹ. ಪತ್ರಿಕೆಯ ಮುಂದಿನ ದಿನಗಳು ಸುಗಮವಾಗಲೆಂದು ಹಾರೈಸುತ್ತೇನೆ.

—ಚಿಶ್ ಪ್ರಭಾ
ಮುಂಬಯಿ

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

ವಿಳಾಸ :
" ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067